

ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# ಮಲೆ ಮಾದೇಶ್ವರ : ಸಾಂಸ್ಕೃತಿಕ ನಿಲುವುಗಳು


ಸಂಶೋಧನ ವಿದ್ಯಾರ್ಥಿ

ಶಿವಕುಮಾರ್ ಬಿ.ಎಸ್.

ಮಾರ್ಗದರ್ಶಕರು

ಪ್ರೊ. ಡಿ. ಲಿಂಗಯ್ಯ





ಎಂ.ವಿ.ಸಿ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.



ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# ಮಲೆ ಮಾದೇಶ್ವರ : ಸಾಂಸ್ಕೃತಿಕ ನಿಲುವುಗಳು

ಸಂಶೋಧನ ವಿದ್ಯಾರ್ಥಿ

ಶಿವಕುಮಾರ್ ಬಿ.ಎಸ್.



ಮಾರ್ಗದರ್ಶಕರು

ಪ್ರೊ. ಡಿ. ಲಿಂಗಯ್ಯ









ಎಂ.ವಿ.ಸಿ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಮಲೆ ಮಾದೇಶ್ವರ : ಸಾಂಸ್ಕೃತಿಕ ನಿಲುವುಗಳು"** ಎಂಬ ಸಂಪ್ರಬಂಧವನ್ನು ಪ್ರೊ. ಡಿ. ಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.



ದಿನಾಂಕ : 30-9-2008

ಸಹಿ

ಸ್ಥಳ : ಬೆಂಗಳೂರು

(ಶಿವಕುಮಾರ್ ಬಿ.ಎಸ್.)

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಮಲೆ ಮಾದೇಶ್ವರ : ಸಾಂಸ್ಕೃತಿಕ ನಿಲುವುಗಳು"** ಎಂಬ ಸಂಪ್ರಬಂಧವನ್ನು ಶಿವಕುಮಾರ್ ಬಿ.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 30-9-2008

ಸಹಿ

ಸ್ಥಳ : ಬೆಂಗಳೂರು

(ಪ್ರೊ॥ ಡಿ. ಲಿಂಗಯ್ಯ)

# ಪರಿವಿಡಿ

# ಅಧ್ಯಾಯ - 1

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡದಲ್ಲಿ ಜಾನಪದ ಅಧ್ಯಯನ ಕಳೆದ ಶತಮಾನದಿಂದಷ್ಟೇ ಗಂಭೀರ ಅಧ್ಯಯನ ಶಿಸ್ತಾಗಿ ಬೆಳೆದಿದೆ. ವಸಾಹತು ಕಾಲದಲ್ಲಿ ಬ್ರಿಟಿಷರಿಂದ ಜಾನಪದ ಅಧ್ಯಯನದ ಆರಂಭವನ್ನು ಗುರ್ತಿಸಬಹುದಾದರೂ ಅದು ಕೇವಲ ಜನಪದ ಕತೆ, ಗೀತೆ, ಲಾವಣಿ ಮೊದಲಾದವುಗಳ ಸಂಗ್ರಹಕಷ್ಟೇ ಸೀಮಿತವಾಗಿತ್ತು. 20ನೇ ಶತಮಾನದ 60ರ ದಶಕದ ನಂತರ ಜಾನಪದವನ್ನು ಶೈಕ್ಷಣಿಕ ಶಿಸ್ತಾಗಿ ಅಧ್ಯಯನ ಮಾಡಲಾಗುತ್ತಿದೆ. 70ರ ದಶಕದಲ್ಲಿ ಜನಪದ ಮಹಾಕಾವ್ಯಗಳನ್ನು ಸಂಗ್ರಹಿಸಲಾಯಿತು. ಕನ್ನಡ ಜನಪದ ಮಹಾಕಾವ್ಯಗಳಾದ ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಹಾಲುಮತ ಮಹಾಕಾವ್ಯ (ಬೀರಪ್ಪ) ಹೀಗೆ ಪ್ರತಿಯೊಂದಕ್ಕೂ ಕೂಡ ಒಂದೊಂದು ವೈಶಿಷ್ಟ್ಯವಿದೆ.

ಮಲೆ ಮಾದೇಶ್ವರ ಜನಪದ ಮಹಾಕಾವ್ಯ ಕೂಡ ಕನ್ನಡದ ಪ್ರಸಿದ್ಧ ಮಹಾಕಾವ್ಯ ಇದರ ಬಗ್ಗೆ ವಿವಿಧ ಅಧ್ಯಯನಗಳು ನಡೆದಿವೆ. ಜೀ.ಶಂ. ಪರಮಶಿವಯ್ಯ, ಪಿ.ಕೆ. ರಾಜಶೇಖರ, ಪ್ರೊ॥ ಡಿ. ಲಿಂಗಯ್ಯ, ಕೇಶವನ್‌ಪ್ರಸಾದ್, ಡಾ॥ ಬಿ.ಎಸ್. ಸ್ವಾಮಿ ಇದರ ಬಗ್ಗೆ ವಿಶೇಷ ಅಧ್ಯಯನಗಳನ್ನು ಕೈಗೊಂಡಿದ್ದಾರೆ. ಜೊತೆಗೆ ಅನೇಕ ವಿಚಾರ ಸಂಕಿರಣಗಳು ನಡೆದಿವೆ. ವಿವಿಧ ವಿದ್ವಾಂಸರು ಹಲವು ಲೇಖನಗಳ ಮೂಲಕ ಕಾವ್ಯವನ್ನು ಅರ್ಥೈಸಿದ್ದಾರೆ.

ಪ್ರಸ್ತುತ ಮಾದೇಶ್ವರನು ಬುಡಕಟ್ಟು (ಸಾಂಸ್ಕೃತಿಕ ವಿವರ ಮತ್ತು ವೈಶಿಷ್ಟ್ಯ ಗುರ್ತಿಸುವುದರೊಂದಿಗೆ) ಜನಾಂಗದ ಜೀವನ ಸುಧಾರಣೆಗೆ ಕೈಗೊಂಡ ನಿಲುವುಗಳನ್ನು ಸಮಗ್ರ ಶೋಧನೆ ಮಾಡುವುದು ಅಧ್ಯಯನದ ಉದ್ದೇಶವಾಗಿದೆ. ಅಂದರೆ ಅವನ 'ಸಾಂಸ್ಕೃತಿಕ ನಿಲುವು'ಗಳೇನು? ಒಂದು ಸಮುದಾಯದಲ್ಲಿ ಅಥವ ವ್ಯಕ್ತಿಯ ಜೀವನದಲ್ಲಿ ಮಾದೇಶ್ವರ ಪ್ರವೇಶ ಮಾಡುವುದಕ್ಕಿಂತ ಮೊದಲು ಜೀವನದ ಬಗೆಗೆ ಅವರ ಧೋರಣೆಗಳು ಏನು? ಅವು ಜೀವ ವಿರೋಧಿಯಾದವೆ? ಅಥವಾ ಅಲ್ಲವೆ? ಅವರ ಜೀವನ ವಿಧಾನದಲ್ಲಿ ಜೀವಪರಕಾಳಜಿಯನ್ನು ತರಲು ಮಾದೇಶ್ವರ ಕೈಗೊಂಡ ಪ್ರಯತ್ನಗಳನ್ನು ಇಲ್ಲಿ ಸಾಂಸ್ಕೃತಿಕ ನಿಲುವುಗಳು ಎಂದು ಗ್ರಹಿಸಲಾಗಿದೆ. ಇದೇ ಸಂಪ್ರಬಂದದಲ್ಲಿ ಈ ಗ್ರಹಿಕೆಯನ್ನು ವಿಶ್ಲೇಷಿಸುವುದು ಮತ್ತು ಶೋಧಿಸುವುದು ನಡೆದಿದೆ.

ಸಂಸ್ಕೃತಿ ಎಂದರೆ 'ಒಂದು ಜನಾಂಗದ ಜೀವನ ವಿಧಾನಗಳ ಮೊತ್ತ'. ಜೀವನ ವಿಧಾನವು ಉಡುವ ಬಟ್ಟೆ, ಉಣ್ಣುವ ಊಟ, ಅದನ್ನು ಗಳಿಸುವ ಬಗೆ, ಆಡುವ ಮಾತು ಮಾಡುವ ಆಚರಣೆ, ನಂಬುವ ಸಂಗತಿ, ಒಡನಾಡಿಗಳೊಂದಿಗಿನ ಸಂಬಂಧ, ಅದರ ಸ್ವರೂಪ, ಸಂಪತ್ತು, ಅದರ ಗಳಿಕೆ ಹೀಗೆ ಅನೇಕ ಅಂಶಗಳನ್ನು ಒಳಗೊಳ್ಳುತ್ತದೆ. ಮಾನವನ ಜೀವನ ವಿಧಾನವು ಪ್ರತಿ ಹಂತದಲ್ಲೂ ಸಂಸ್ಕರಣೆಯಾಗಿ ಹೀಗೆ ಒಂದು ಹಂತದಿಂದ ಇನ್ನೊಂದು ಹಂತಕ್ಕೆ ಹೋಗುವಾಗಲಿನ ಅಂಶಗಳನ್ನೂ ಒಳಗೊಂಡಿದೆ. ಹೀಗೆ

ಸಂಸ್ಕರಣೆಯಾಗುವುದು ಸುಧಾರಣೆಯಾಗುವುದು. ಕೆಲವೊಮ್ಮೆ ಸಹಜ ಪ್ರಕ್ರಿಯೆಯಾದರೂ ಮತ್ತೆ ಕೆಲವೊಮ್ಮೆ ಧಾರ್ಮಿಕ / ಸಮುದಾಯದ ನಾಯಕರ ಬಿಗಿ ನಿಲುವುಗಳು ಕೂಡ ಪ್ರಧಾನವಾಗಿ ಕಾರಣವಾಗುತ್ತವೆ.

ಹೀಗೆ ಕಾವ್ಯದಲ್ಲಿ ಬರುವ ಅನೇಕ ವ್ಯಕ್ತಿಗಳ ಜೀವನದಲ್ಲಿ ಕೆಲವು ಕಠಿಣತಮವಾದ ಜೀವವಿರೋಧಿ ಅಂಶಗಳು ಇವೆ. ಈ ಜೀವವಿರೋಧಿಯಾದ ನಿಲುವುಗಳನ್ನು ಅಂದರೆ ಪುರುಷ ಮೇಲು ಸ್ತ್ರೀ ಕೀಳು, ಸ್ತ್ರೀ ಪುರುಷನ ಆಸ್ತಿ, ಸ್ತ್ರೀ ಮೇಲಿನ ದೌರ್ಜನ್ಯ, ಹಣಕ್ಕಾಗಿ ಬೇರೆಯವರನ್ನು ವಿಷವಿಕ್ಕಿ ಸಾಯಿಸುವುದು, ಸಂಪತ್ತನ್ನು ತನ್ನಲ್ಲಿಯೇ ಕೇಂದ್ರೀಕರಿಸಿಕೊಳ್ಳುವುದು ತನ್ನ ಸ್ವಾರ್ಥಕ್ಕಾಗಿ ಬೇರೆಯವರನ್ನೂ ಹಿಂಸಿಸುವುದು, ಆಕ್ರೋಶಕ್ಕೆ ಒಳಗಾಗುವುದು. ಇವುಗಳನ್ನು ಮಾದೇಶ್ವರ ನಿಗ್ರಹಿಸುತ್ತಾನೆ. ಈ ಬಗೆಯ ಅಂದರೆ ಜೀವನ ವಿಧಾನದಲ್ಲಿ ಸಹಜವೆಂಬಂತೆ ಅಡಕವಾಗಿರುವ ಜೀವವಿರೋಧಿ ಧೋರಣೆಗಳನ್ನು ಜೀವನ ಮುಖಿ ಮತ್ತು ಜೀವಪರವಾಗಿಸುವುದು ಮಾದೇಶ್ವರನ ಉದ್ದೇಶ ಎಂದು ಗ್ರಹಿಸಲಾಗಿದೆ. ಹೀಗೆ ಮಾಡುವುದನ್ನೇ ಮಾದೇಶ್ವರನ ಸಾಂಸ್ಕೃತಿಕ ನಿಲುವುಗಳೆಂದು ಗ್ರಹಿಸಲಾಗಿದೆ.

ಅಂದರೆ ಪ್ರತಿ ವ್ಯಕ್ತಿಯ ಜೀವನದಲ್ಲಿ ಮಾದೇಶ್ವರ ಸ್ತ್ರೀಯ ಬಗೆಗೆ ಸಮಾನತೆಯ ಗೌರವಭಾವ, ಮಾನವೀಯತೆ, ಆರ್ಥಿಕ ವಿಕೇಂದ್ರೀಕರಣ, ದೇವರ ಬಗ್ಗೆ ಆಸಕ್ತಿ, ದುಷ್ಟ ಶಿಕ್ಷಣ ಈ ಬಗೆಯ ಅಂಶಗಳನ್ನು ಜಾಗೃತಗೊಳಿಸಿ ಅವರ ಜೀವನದಲ್ಲಿ ಮನಗಾಣಿಸುತ್ತಾನೆ. ಸಂಪ್ರಬಂಧದ ಪ್ರತಿ ಅಧ್ಯಾಯದಲ್ಲಿ ಈ ಅಂಶಗಳನ್ನು ಕಾವ್ಯದ ಹಿನ್ನಲೆಯಲ್ಲಿ ಚರ್ಚಿಸಲಾಗಿದೆ. ಈ ಅಂಶಗಳಿಗೆ ಒತ್ತು ನೀಡಿ ಕಾವ್ಯದಲ್ಲಿರುವ ಸನ್ನಿವೇಶಗಳನ್ನು ಪೂರಕವಾಗಿ ವಿಶ್ಲೇಷಿಸಲಾಗಿದೆ. ಮಾದೇಶ್ವರ ಒಬ್ಬರ ಜೀವನದಲ್ಲಿ ಮೂಲಭೂತ ಪರಿವರ್ತನೆಗಳನ್ನು ಬದಲಾವಣೆಗಳನ್ನು ಮಾಡಿ, ಅದನ್ನು ಇಡೀ ಸಮುದಾಯ ಗ್ರಹಿಸಿ ಬಾಳಬೇಕು ಎನ್ನುತ್ತಾನೆ.

ಮೊದಲು ಅಧ್ಯಯನದ ವಿಷಯವನ್ನಾಗಿ 'ಸ್ತ್ರೀವಾದಿ ನೆಲೆ' ಎಂಬ ಅಂಶವನ್ನು ತೆಗೆದುಕೊಳ್ಳಲಾಗಿದೆ. ಸ್ತ್ರೀವಾದ ಸ್ತ್ರೀ ಪುರುಷರ ನಡುವಿನ ಲಿಂಗಾಧಾರಿತ ತಾರತಮ್ಯಗಳ ಪ್ರಚಲಿತ ವ್ಯವಸ್ಥೆಯನ್ನು ಬದಲಾಯಿಸಲು ಒತ್ತಾಯಿಸುತ್ತದೆ. ಸಾಮಾಜಿಕ, ರಾಜಕೀಯ, ಆರ್ಥಿಕ ಮುಂತಾದ ಬದುಕಿನ ನೆಲೆಗಳಲ್ಲಿ ಸ್ತ್ರೀ ಪುರುಷರನ್ನು ಸಮಾನವಾಗಿ ಸ್ಥಾಪಿಸಬಲ್ಲ ವ್ಯವಸ್ಥೆಗಾಗಿ ನಡೆಯುವ ಹೋರಾಟವೆ ಅದರ ಮುಖ್ಯವಾದ ಕಾರ್ಯವಿಧಾನ ವಾಗಿದೆ. ಸ್ತ್ರೀವಾದ ವರ್ತಮಾನದ ಜೀವನ ಕ್ರಮವನ್ನು ರೂಪಿಸಿರುವಂಥ ಸಂಸ್ಕೃತಿಯ ಸ್ವರೂಪವನ್ನು ಪರಿಶೀಲನೆಗೆ ಗುರಿ ಮಾಡುತ್ತದೆ. ಸ್ಥಾಪಿತ ಮೌಲ್ಯಗಳು ನಂಬಿಕೆಗಳು, ಆಚರಣೆಗಳನ್ನು ವೈಜ್ಞಾನಿಕ ವಾಸ್ತವಾಂಶಗಳ ಬೆಳಕಿನಲ್ಲಿ ಒರೆಹಚ್ಚಿ ಅವುಗಳಲ್ಲಿನ ಮಿಥ್ಯಾಂಶಗಳನ್ನು ಸ್ತ್ರೀವಾದವು ಪ್ರಶ್ನಿಸುತ್ತದೆ. ಮಲೆಮಾದೇಶ್ವರ ಕಾವ್ಯದಲ್ಲಿ ಸಂಕಮ್ಮ ಸ್ತ್ರೀವಾದಿಯಾಗಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯನ್ನು ಕ್ರೌರ್ಯವನ್ನು ಪ್ರಶ್ನಿಸಿ ತನ್ನ ಜೀವನವನ್ನು ಸ್ವತಂತ್ರವಾಗಿಸಲು ಯತ್ನಿಸುತ್ತಾಳೆ. ಪುರುಷ ಮೇಲು ಸ್ತ್ರೀ ಕೀಳು ಎಂಬ ಪರಿಕಲ್ಪನೆಯನ್ನು ನಿರಾಕರಿಸಿದ್ದಾಳೆ. ಇಡೀ ಅಧ್ಯಾಯವು ಸಂಕಮ್ಮ ತನ್ನ ಗಂಡನಾದ ನೀಲಯ್ಯನನ್ನು ಪ್ರತಿಭಟಿಸುವುದನ್ನು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸಿದೆ. ಮುಂದೆ ಮಾದೇಶ್ವರ ಕೂಡ ಸಂಕಮ್ಮನ ಪರವಾಗಿ ನಿಲ್ಲುತ್ತಾನೆ. ಅದೂ ಕೂಡ ಸ್ತ್ರೀವಾದಿ

ನೆಲೆಯಲ್ಲಿ ವಿಶ್ಲೇಷಣೆಗೊಂಡಿದೆ. ಸ್ತ್ರೀ ಮೇಲಿನ ದೌರ್ಜನ್ಯವನ್ನು ಖಂಡಿಸಿ ಪುರುಷನಿಗೆ ಸ್ತ್ರೀ ಬಗೆಗಿರುವ ಧೋರಣೆಯನ್ನು ಬದಲಿಸುತ್ತಾನೆ. ಈ ವಿಷಯಕ್ಕೆ ಮಹಾಕಾವ್ಯದಲ್ಲಿ ಬರುವ 'ಸಂಕಮ್ಮನ ಸಾಲು' ಎಂಬ ಪಠ್ಯಭಾಗವನ್ನು ಬಳಸಿಕೊಳ್ಳಲಾಗಿದೆ. ಇಡೀ ಅಧ್ಯಾಯದಲ್ಲಿ ನೀಲಯ್ಯನ ಬಗೆಗೆ ತಳೆಯುವ ನಿಲುವನ್ನು ಸ್ತ್ರೀವಾದಿ ನೆಲೆಯಿಂದ ವಿಶ್ಲೇಷಿಸಲಾಗಿದೆ.

ಮಾನವೀಯತೆ ಮನುಷ್ಯನಲ್ಲಿರಬೇಕಾದ ಸಹಜ ಗುಣ. ಆದರೆ ಅವನಲ್ಲಿ ನಿಷ್ಠುರವಾದ ಮತ್ತು ಒರಟು ನಡವಳಿಕೆಗಳನ್ನು ಕಾಣುತ್ತೇವೆ. ಸಂಗಾತಿಯನ್ನು ಅತ್ಯಂತ ಅವಮಾನಕ್ಕೆ ಒಳಗು ಮಾಡುವುದು, ಸಂದೇಹಪಡುವುದು, ಅವಳ ಮೇಲೆ ದೌರ್ಜನ್ಯ ನಡೆಸುವುದು, ಆರ್ಥಿಕ ಸಂಪತ್ತು ಕೇಂದ್ರೀಕರಿಸುವುದು, ಬೇಟೆಗಾಗಿ ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲುವುದು ಇವುಗಳು ಅಮಾನವೀಯ ಅಂಶಗಳಾಗಿವೆ. ಇಂತಹ ಅಮಾನವೀಯದ ಅಂಶಗಳ ಜಾಗದಲ್ಲಿ, ಒಡನಾಡಿಗಳಿಗೆ ಗೌರವ, ಸ್ತ್ರೀ ಬಗೆಗಿನ ಸಮಾನತೆಯ ಭಾವ, ಬೇಟೆಯನ್ನು ಕೈಬಿಡಿಸುವುದು, ಆರ್ಥಿಕವಾಗಿ ಸಂಪತ್ತು ಕ್ರೋಢೀಕರಣವಾಗುವುದನ್ನು ತಪ್ಪಿಸುವುದು, ವಿಶ್ವಾಸ, ನಂಬಿಕೆ, ಅಹಂಕಾರ ನಿವಾರಣೆ ಇವುಗಳು ಮಾನವೀಯತೆಯ ಅಂಶಗಳೆಂದು ಭಾವಿಸಲಾಗಿದೆ. ಈ ಅಂಶಗಳ ಜಾಗದಲ್ಲಿ ಅತಿಯಾಸೆಯೇ ಮೊದಲಾದ ದುರ್ಗುಣಗಳನ್ನು ಮಾದೇಶ್ವರ ಹೇಗೆ ಹೋಗಲಾಡಿಸಿದ ಎಂಬುದನ್ನು ಈ ಸಂಪ್ರಬಂಧದಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಹಿತದೃಷ್ಟಿಯ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ಸಂಕಮ್ಮನ ಶೀಲವನ್ನು ಶಂಕಿಸುವುದರ ಜೊತೆಗೆ ಅವಳ ಬಗ್ಗೆ ನಂಬಿಕೆ ವಿಶ್ವಾಸವೇ ಇಲ್ಲದಂತೆ ನೀಲಯ್ಯ ನಡೆದುಕೊಳ್ಳುತ್ತಾನೆ. ಅವಳನ್ನು ಬಂಜೆ ಎಂದು ಹೀಯಾಳಿಸುತ್ತಾನೆ. ಅವಳನ್ನು ಸಂಗಾತಿ ಎಂದು ತಿಳಿಯದೆ ತನ್ನ ಸ್ವತ್ತು ಎಂದು ಭಾವಿಸುತ್ತಾನೆ. ಅವಳ ಒಡವೆ-ವಸ್ತ್ರಗಳನ್ನು ಬಿಚ್ಚಿಸಿಕೊಂಡು ಅವಳನ್ನು ಸಂಪೂರ್ಣ ಬೆತ್ತಲೆಗೊಳಿಸುತ್ತಾನೆ. ತನ್ನ ಸತಿ ಎಂಬ ಕನಿಷ್ಠ ಗೌರವವನ್ನು ಅವಳಿಗೆ ಕೊಡುವುದಿಲ್ಲ. ಅವಳಿಗೆ ತೇಗದೆಲೆ ಎಕ್ಕದೆಲೆ ಇವುಗಳನ್ನು ಉಡಿಸುತ್ತಾನೆ. ಕಣ್ಣುಗಳನ್ನು ಹೊಲೆಯುತ್ತಾನೆ, ಬಾಯಿಗೆ ಬೀಗ ಹಾಕುತ್ತಾನೆ. ಅವಳ ಬೆನ್ನ ಮೇಲೆ ಒಂದು ಕಲ್ಲು ಬಂಡೆಯನ್ನು ತಂದು ಇಡುತ್ತಾನೆ. ಅಂದರೆ ಅವಳ ಸೌಂದರ್ಯದ ಕಾರಣದಿಂದಲೇ ಮದುವೆಯಾಗಿದ್ದರೂ ಅವಳ ಶೀಲವನ್ನು ಶಂಕಿಸುತ್ತಾನೆ. ಇಂತಹ ವ್ಯಕ್ತಿಗೆ ಮಾದೇಶ್ವರ ಸತಿಯ ಬಗ್ಗೆ ನಂಬಿಕೆ ವಿಶ್ವಾಸ ಇವುಗಳಿರಬೇಕು ಎಂದು ಮಾನವೀಯ ಅಂಶಗಳನ್ನು ಬೋಧಿಸುತ್ತಾನೆ.

ತನ್ನ ಜೀವನ ಅವಿಭಾಜ್ಯ ಅಂಗವಾಗಿದ್ದ ಬೇಟೆಯನ್ನು ಬೇಡರ ಕನ್ನಯ್ಯ ಮುಂದುವರೆಸದಂತೆ ತಡೆಯುತ್ತಾನೆ ಮಾದೇಶ್ವರ ಏಕೆಂದರೆ ಪ್ರಾಣಿಹಿಂಸೆ ಸಲ್ಲದು ಎಂಬುದು ಮಾದೇಶ್ವರನ ನಿಲುವು. ಮುಂದೆ ಬೇವಿನಟ್ಟಿ ಕಾಳಮ್ಮ ಸಂಪತ್ತನ್ನು ಕೂಡಿಡುತ್ತಿರುವಾಗ ಅವಳ ಮನೆಗೆ ಭಿಕ್ಷೆಗೆ ಹೋಗುತ್ತಾನೆ. ಆಗ ಕಾಳಮ್ಮ ಭಿಕ್ಷೆ ಕೊಡುವುದಿಲ್ಲ. ಮಾದೇಶ್ವರನ ಕೃಪೆಯಿಂದ ಶ್ರೀಮಂತಳಾದ ಕಾಳಮ್ಮ ಮಾದೇಶ್ವರನನ್ನು ಮರೆಯುವ ಹಂತ ತಲುಪುತ್ತಾಳೆ. ಆಗ ಅವಳನ್ನು ನಾಶಮಾಡುತ್ತಾನೆ. ಇತರರಿಗೆ ಈ ಮೂಲಕ ಪಾಠ ಕಲಿಸುತ್ತಾನೆ. ಮಾಡಿದ ಉಪಕಾರವನ್ನು ಮರೆಯುವುದು ಅಮಾನವೀಯತೆ, ಸಂಪತ್ತು ಕ್ರೋಢೀಕರಣ ಮಾಡುವುದು ಅಮಾನವೀಯತೆ, ಸಂಪತ್ತನ್ನು ಹಂಚುವ ಮತ್ತು ಉಪಕಾರ ಸ್ಮರಣೆ ಮಾಡುವುದು ಮಾನವೀಯತೆ, ಈ

ಅಂಶಗಳನ್ನು ಕಾವ್ಯದ ಭಾಗಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

'ಆರ್ಥಿಕ ವಿಕೇಂದ್ರೀಕರಣ'- ಸಿರಿ ಸಂಪತ್ತು ಒಂದು ಕಡೆ ಶೇಖರವಾಗಬಾರದು. ಹಾಗೆ ಆದರೆ ಅದು ಅಸ್ವಾಸ್ಥ್ಯ ಸಮಾಜದ ಲಕ್ಷಣ. ಒಬ್ಬ ವ್ಯಕ್ತಿಯಲ್ಲಿ ಸಂಗ್ರಹವಾದ ಸಂಪತ್ತು ಸಹಜ ಸಂಪತ್ತಾಗಿ ಸಮಾಜಕ್ಕೆ ಹರಿದು ಬಂದಾಗ ಮಾತ್ರ ಸಮುದಾಯದಲ್ಲಿ ಸ್ವಾಸ್ಥ್ಯ ನೆಲೆಸುವುದು. ಸಮತೋಲನ ಏರ್ಪಡುವುದು. ಇಲ್ಲವಾದರೆ ಉಳ್ಳವರು ವಿಪರೀತ ಅಹಂಕಾರದಲ್ಲಿ ಮೆರೆಯುತ್ತಾರೆ, ಇಲ್ಲದವರು ಸಾಮಾನ್ಯ ಸುಖದಿಂದಲೂ ವಂಚಿತರಾಗುತ್ತಾರೆ. ಸಮಾಜದ ಸಂಪತ್ತು ಇರುವುದು ಎಲ್ಲರೂ ಸಮಾನವಾಗಿ ಹಂಚಿಕೊಳ್ಳಲೆಂದು, ಆದರೆ ಅದನ್ನು ಒಬ್ಬ ವ್ಯಕ್ತಿ ತನ್ನ ಆರ್ಥಿಕ ಬಿಗಿ ಧೋರಣೆಯಿಂದ ಇತರರಿಗೆ ಕಷ್ಟ ನೀಡಿ ಸಂಗ್ರಹಿಸಲು ಆರಂಭಿಸುತ್ತಾನೆ. ಇದನ್ನೇ ಆರ್ಥಿಕ ಕ್ರೋಢೀಕರಣ ಎನ್ನುವುದು. ಇದು ಆರೋಗ್ಯಕರ ಸಮಾಜಕ್ಕೆ ಹಾನಿಕರ. ಹಸಿದವನಿಗೂ ಸಿಟ್ಟಿದೆ. ಅವನೂ ಕೂಡ ಆಕ್ರೋಶಕ್ಕೆ ಒಳಗಾಗಿ ದಂಗೆ ಏಳುತ್ತಾನೆ. ತಾನು ದುಡಿದ ಪ್ರತಿಫಲ ಬೇರೆಯವರ ಕೈ ಸೇರುವುದನ್ನು ಅವನು ಹೆಚ್ಚು ಕಾಲ ಸಹಿಸಲಾರ. ಹೀಗೆ ಸಂಪತ್ತನ್ನು ಸಂಗ್ರಹಿಸಿದ್ದರೆ, ಅದನ್ನು ವ್ಯವಸ್ಥಿತವಾಗಿ ದೇವರಿನ ಹೆಸರಿನಲ್ಲಿಯಾಗಲೀ ಇನ್ನಾವುದೇ ಉದ್ದೇಶದಿಂದ ಸಮಾಜಕ್ಕೆ ಹಂಚಬೇಕು ಹಾಗೆ ಮಾಡಿದಾಗಲೇ ಆರೋಗ್ಯಕರ ಸಮಾಜ, ರಾಷ್ಟ್ರ ನಿರ್ಮಾಣ ಸಾಧ್ಯ. ಆದರೆ ಅದನ್ನು ಸರಳವಾಗಿ ಹೇಳಿದರೆ ಅನೇಕರು ಗ್ರಹಿಸುವುದಿಲ್ಲ. ಮಾದೇಶ್ವರ ಬೇವಿನಟ್ಟಿ ಕಾಳಮ್ಮನಲ್ಲಿರುವ ಸಂಪತ್ತನ್ನು ಹಂಚಿಕೆ ಮಾಡಲು ಹೇಗೆ ಪ್ರಯತ್ನಿಸುತ್ತಾನೆ. ಮತ್ತು ಕಾಳಮ್ಮನ ಸಂಪತ್ತಿನ ಬಗೆಗಿನ ವ್ಯಾಮೋಹ ಎಂಥದ್ದು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಿದೆ. ಮಾದೇಶ್ವರ ಒಬ್ಬ ವ್ಯಕ್ತಿಯ ಬಗೆಗೆ ತಳೆಯುವ ನಿಲುವನ್ನು ಇಡೀ ಸಮುದಾಯಕ್ಕೆ ಸಮಾಜಕ್ಕೆ ಅನ್ವಯಿಸಿ ನೋಡಿದಾಗ ಮಾತ್ರ ನಮಗೆ ಅವನ ಮಹತ್ವ ತಿಳಿಯುತ್ತದೆ. ಈ ಅಧ್ಯಾಯದಲ್ಲಿ ಬೇವಿನಟ್ಟಿ ಕಾಳಮ್ಮನನ್ನು ಮುಖ್ಯವಾಗಿಟ್ಟುಕೊಂಡು ಅವಳ ಆಳುಗಳು, ಅವರ ಜೊತೆಗಿನ ಸಂಬಂಧ, ಅವರ ಬಗೆಗಿನ ಕಾಳಮ್ಮನ ನಿಲುವು, ಅಂದರೆ ದುಡಿಯುವ ವರ್ಗದವರ ಬಗೆಗಿನ ಧೋರಣೆ ಇವುಗಳನ್ನು ವಿಶ್ಲೇಷಿಸಲಾಗಿದೆ. ಮಾದೇಶ್ವರ ಉಳ್ಳವರ ಆದರೆ ಸಂಪತ್ತನ್ನು ಹಂಚದವರ ಬಗೆಗಿನ ನಿಲುವೇನು ಎನ್ನುವುದನ್ನು ಚರ್ಚಿಸಲಾಗಿದೆ.

ದೈವದ ಕಡೆಗೆ ಗಮನ : ಬುಡಕಟ್ಟು ಸಮುದಾಯಕ್ಕೆ ಧಾರ್ಮಿಕತೆಯ ಸ್ಪರ್ಷ ನೀಡಿದ ಗೌರವ ಮಾದೇಶ್ವರನಿಗೆ ಸಲ್ಲುತ್ತದೆ. ಮಾನವ ಜನಾಂಗ ಬೆಳವಣಿಗೆಯ ಹಂತದಲ್ಲಿ ಸಮುದಾಯಗಳಲ್ಲಿ ಬದುಕುವುದನ್ನು ರೂಢಿಸಿಕೊಂಡ ನಂತರ ಅಲ್ಲಿ ಕೃಷಿ ಇತ್ಯಾದಿಗಳನ್ನು ಆರಂಭಿಸಿದಂತೆಯೇ ದೇವರ ಬಗೆಗೂ ಕೂಡ ಚಿಂತನೆಯನ್ನು ನಡೆಸಿತು. ಅಂದರೆ ಸಮುದಾಯದಲ್ಲಿ ಯಾರೋ ಒಬ್ಬ ದೇವರ, ಧರ್ಮದ ಬಗೆಗೆ ಚಿಂತನೆ ನಡೆಸುತ್ತಾನೆ ಉಳಿದವರಿಗೂ ಅದನ್ನು ಮನಗಾಣಿಸುತ್ತಾನೆ. ಇಲ್ಲಿ ಕೂಡ ಅದೇ ಆಗುತ್ತದೆ. ಅಂದರೆ ಕೃಷಿ ಚಟುವಟಿಕೆಯಲ್ಲೇ ಜೀವನ ನಡೆಸುತ್ತಿದ್ದ ವ್ಯಕ್ತಿಗಳಿಗೆ ದೇವರ ಇರುವಿಕೆಯನ್ನು ಮಾದೇಶ್ವರ ತಿಳಿಸುತ್ತಾನೆ. ಅವರ ಮಹತ್ವವನ್ನು ಮನಗಾಣಿಸುತ್ತಾನೆ. ದೇವರು ಕೂಡ ತಮ್ಮ ಜೀವನವನ್ನು ನಿಯಂತ್ರಿಸಬಲ್ಲ ಎಂಬುದನ್ನು ಇಲ್ಲಿ ತಿಳಿಸುತ್ತಾನೆ. ಈ ಅಧ್ಯಾಯಕ್ಕೆ ಕಾವ್ಯದ ಆಲಂಬಾಡಿ ಜುಂಜೇಗೌಡನ ಸಾಲು ಎಂಬ ಪಠ್ಯಭಾಗವನ್ನುಹಿನ್ನೆಲೆಯಲ್ಲಿಟ್ಟುಕೊಂಡು ಚರ್ಚಿಸಲಾಗಿದೆ. ಅನುಷಂಗಿಕವಾಗಿ ಸಂಕಮ್ಮನ ಸಾಲು ಭಾಗವನ್ನು ಬಳಸಿಕೊಳ್ಳಲಾಗಿದೆ. ಅತ್ಯಂತ ಕಷ್ಟದಲ್ಲಿದ್ದಾಗ

ಮಾದೇಶ್ವರ ಸಂಕಮ್ಮನನ್ನು ಕಾಪಾಡುತ್ತಾನೆ. ಆ ಮೂಲಕ ಸಂಕಮ್ಮನಿಗೂ, ಕೇವಲ ಮಂತ್ರ ತಂತ್ರಗಾರನಾಗಿದ್ದ ನೀಲಯ್ಯನಿಗೂ ದೇವರ ಕಡೆಗೆ ಗಮನ ಹರಿಸುವಂತೆ ಮಾಡುತ್ತಾನೆ. ಧರ್ಮದ ಮಹತ್ವವನ್ನು ತಿಳಿಸುತ್ತಾನೆ.

ಮನುಷ್ಯನು ಕಷ್ಟ ಪಡದೆ ಸಂಪತ್ತಿಗಾಗಿ ಹಣಕ್ಕಾಗಿ ಮೊದಲಿನಿಂದಲೂ ಆಸೆ ಪಡುವುದು ಸಹಜ ಸ್ವಭಾವವೇ ಆಗಿದೆ. ಆದರೆ ಅದು ಸಹಜವಾಗಿ ಈಡೇರುವಂತಹದ್ದಲ್ಲ. ಆದರೆ ಅದನ್ನು ಪಡೆಯಲೇಬೇಕೆಂದು ಹಠಕ್ಕೆ ಬೀಳುತ್ತಾನೆ. ಇಂತಹ ಸಂದರ್ಭದಲ್ಲಿ ಅವನು ಮೋಸ, ಕಳ್ಳತನ ದರೋಡೆ ಕೊಲೆ ಇವುಗಳನ್ನು ಮಾಡುತ್ತಾನೆ. ಇವುಗಳು ಅಮಾನವೀಯ ಮತ್ತು ದುಷ್ಟ ಸಂಗತಿಗಳಾಗಿವೆ. ಆದರೂ ಇವುಗಳನ್ನು ಕೆಲವರಾದರೂ ತಮ್ಮ ಜೀವನದ ಅವಿಭಾಜ್ಯ ಅಂಗಗಳನ್ನಾಗಿ ಮಾಡಿಕೊಂಡಿರುತ್ತಾರೆ. ಅಂತಹವರು ದುಷ್ಟರೆನಿಸುತ್ತಾರೆ. ಇಂತಹ ವ್ಯಕ್ತಿಗಳನ್ನು ನಿರ್ಮೂಲನ ಮಾಡಲು ಶಿಕ್ಷಿಸಲು ಮಾದೇಶ್ವರ ಪ್ರಯತ್ನ ಮಾಡುತ್ತಾನೆ. ಯಶಸ್ವಿಯೂ ಆಗುತ್ತಾನೆ. ಆ ಮೂಲಕ ಆರೋಗ್ಯಕರ ಜೀವನ ವಿಧಾನ ರೂಪಿಸುತ್ತಾನೆ. ಮಾದೇಶ್ವರ ಇಂತಹ ಅಂಶಗಳು ಮನುಷ್ಯನ ಸಹಬಾಳ್ವೆಗೆ ಹಾನಿತರುವುದರಿಂದ ಅವುಗಳಿಗೆ ಅವಕಾಶ ಕೊಡುವುದಿಲ್ಲ. ಒಂದು ವೇಳೆ ಅಂತಹ ವರ್ತನೆಗಳು ಕಂಡುಬಂದರೆ ಅದನ್ನು ಸುಧಾರಿಸಲು ಪ್ರಯತ್ನಿಸಿ ಮಿತಿ ಮೀರಿದರೆ ನಾಶಮಾಡುತ್ತಾನೆ. ಅಂದರೆ ಒಂದು ಸಂಸ್ಕೃತಿಯನ್ನು ಸುಧಾರಿಸಲು ಇವೆಲ್ಲ ಅನಿವಾರ್ಯ ಎಂದುಕೊಂಡಿದ್ದಾನೆ ಮಾದೇಶ್ವರ. ಜೀವನ ಸಾಗಿದಂತೆ ಅದು ಔನ್ನತ್ಯದ ಕಡೆ ಸಾಗಬೇಕು. ಅಧೋಗತಿಗೆ ಇಳಿಯಬಾರದು ಎಂಬುದು ಮಾದೇಶ್ವರನ ನಿಲುವು. ಈ ಅಧ್ಯಾಯಕ್ಕೆ ಇಕ್ಕೇರಿ ದೇವಮ್ಮನ ಸಾಲು ಮತ್ತು ದುಂಡಮ್ಮನ ಸಾಲು ಎರಡೂ ಭಾಗಗಳನ್ನು ಆಯ್ದುಕೊಳ್ಳಲಾಗಿದೆ. ಜೀವನ ವಿಧಾನದಲ್ಲಿ ದುಷ್ಟತನ ಸಲ್ಲದು ಒಂದು ವೇಳೆ ಹಾಗೆ ಕಂಡುಬಂದರೆ ಅವರನ್ನು ಮಾದೇಶ್ವರ ಶಿಕ್ಷಿಸುತ್ತಾನೆ. ಈ ಮಾತನ್ನು ಸಮರ್ಥಿಸಲು ಇಡೀ ಅಧ್ಯಾಯವನ್ನು ಬಳಸಿಕೊಳ್ಳಲಾಗಿದೆ. ಇಡೀ ಅಧ್ಯಾಯ ದುಷ್ಟತನ ಅದರ ಅತಿರೇಕ ಮಾದೇಶ್ವರ ಅವುಗಳನ್ನು ಗ್ರಹಿಸುವ ಮತ್ತು ನಾಶಮಾಡುವ ಶಿಕ್ಷಿಸುವ ಬಗೆ ಈ ಮನೋಧರ್ಮದಿಂದ ಇಡೀ ಅಧ್ಯಾಯ ಮೂಡಿಬಂದಿದೆ.

ಮಕ್ಕಳು ಅರೋಗ್ಯ ಸರಿಯಿಲ್ಲದಿದ್ದಾಗ ಹೇಗೆ ತಂದೆ ತಾಯಿಗಳು ಅವರಿಗೆ ಬೆದರಿಸಿ ಔಷಧಿಗಳನ್ನು ಕೊಡುವಂತೆ ಆ ಮೂಲಕ ಅವರನ್ನು ಆರೋಗ್ಯವಂತರನ್ನಾಗಿ ಮಾಡುವಂತೆ, ಮಾದೇಶ್ವರ ಕೂಡ ತನ್ನ ಒಕ್ಕಲುಗಳ ಸಮುದಾಯದ ಜೀವನವನ್ನು ಸುಧಾರಿಸುತ್ತಾನೆ. ಆದರೆ ಈ ಸುಧಾರಣಾ ಧೋರಣೆಯನ್ನು ಮಾದೇಶ್ವರನನ್ನು ಎರಡನ್ನೂ ಸಹಜವಾಗಿ ಸಮಾಜ ಒಪ್ಪಿಕೊಳ್ಳುವುದಿಲ್ಲ. ಹಾಗಾಗಿ ಅವರನ್ನು ತನ್ನ ಹಿಂಬಾಲಕರನ್ನಾಗಿ ಅಥವಾ ಒಕ್ಕಲುಗಳನ್ನಾಗಿಸಿಕೊಳ್ಳಲು ಈ ಮೂಲಕ ಅವರ ಜೀವನ ಸುಧಾರಣೆ ಮಾಡಲು ಕೆಲವು ಪವಾಡಗಳನ್ನು ಮಾಡಬೇಕಾಗುತ್ತದೆ. ಅತಿಮಾನುಷ ಅಂಶಗಳು ಸಂಸ್ಕೃತಿ ಸುಧಾರಣೆಯಲ್ಲಿ ಒಕ್ಕಲು ಪಡೆಯುವುವಲ್ಲಿ ಹೇಗೆ ಬಳಕೆಯಾದವು ಎನ್ನುವುದನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಹುಲಿವಾಹನ ಮಾಡಿಕೊಳ್ಳುವುದು, ಸ್ವತಃ ಬಿಳಿ ಪಲ್ಲಿಯಾಗುವುದು ಇತ್ಯಾದಿಗಳು ಇದು ಒಂದು ಭಾಗವಾದರೆ. ಮಲೆ ಮಾದೇಶ್ವರ ಬೆಟ್ಟದಲ್ಲಿ ನಡೆಯುವ ಆಚರಣೆಗಳ ಬಗೆಗೆ ಸಂಕ್ಷಿಪ್ತವಾಗಿ ವಿಶ್ಲೇಷಿಸುವುದು ಈ ಅಧ್ಯಾಯದ ಮತ್ತೊಂದು ಭಾಗವಾಗಿದೆ. ಮಾದೇಶ್ವರನ ಕ್ಷೇತ್ರಕ್ಕೆ ಪ್ರತಿ ಅಮಾವಾಸ್ಯೆಗಳಲ್ಲೂ ಯಾತ್ರಾರ್ಥಿಗಳು, ಕಂಸಾಳೆ

ಗುಡ್ಡರು ಬಂದು ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಹಾಲರವಿ ಸೇವೆ, ಆ ಅರವಿ ಮಾಡಲು ಜಲುಗೊಂಬಿನ ಬಿಳೀ ಹಸುವಿನ ಹಾಲುಬೇಕು ಅದರಿಂದ ಮಣ್ಣನ್ನು ಬಳಸಿಕೊಂಡು ಅರವಿಯನ್ನು ಮಾಡಬೇಕು. ಆ ಅರವಿಯಲ್ಲಿ ಮೈನೆರೆಯದ ಬಾಲಕಿಯರು ಹಾಲನ್ನು ಮಾದೇಶ್ವರನ ಮಜ್ಜಣಕ್ಕೆ ತರಬೇಕು.

12 ವರ್ಷಕ್ಕೊಮ್ಮೆ ನಡೆಯುವ ಶೇಷಣ್ಣೊಡೆಯರ ಜಾತ್ರೆಯಲ್ಲಿ, ಹಸಿ ಭತ್ತವನ್ನು ಕುಟ್ಟಿ, ಉಪವಾಸವಿರುವ ಪೂಜಾರಿ ಅಂತರಗಂಗೆ ನೀರು, ಹಾಲಿನಲ್ಲಿ ಅನ್ನವನ್ನು ಮಾಡುತ್ತಾರೆ, ಶೇಷಣ್ಣೊಡೆಯ ದನ ಕಾಯುತ್ತಿದ್ದ ಎಂಬ ಪ್ರತೀತಿ ಇದ್ದುದರಿಂದ ಅವನ ಪೂಜೆಗೆ ಒಂದು ಕೊಳಲು, ಕತ್ತಿ, ಕೊಡಲಿಗಳನ್ನು ಗದ್ದಿಗೆ ಮೇಲಿಟ್ಟು ಪೂಜಿಸುತ್ತಾರೆ. ಆ ದಿನ ತಮ್ಮಡಿ ಹಾಗೂ ಸಾಲೂರು ಮಠದ ಸ್ವಾಮಿಗಳು ಉಪವಾಸವಿರುತ್ತಾರೆ.

ಸಂಪ್ರಬಂಧದಲ್ಲಿ ಮಾದೇಶ್ವರ ಸಮುದಾಯದ ಜೀವನ ವಿಧಾವನ್ನು ಸುಧಾರಿಸಲು ಕೈಗೊಂಡ ಕ್ರಮಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಈ ಅಧ್ಯಯನಕ್ಕೆ ಪಿ.ಕೆ. ರಾಜಶೇಖರ್ ಅವರ ಮಲೆಯ ಮಾದೇಶ್ವರ, ಕೇಶವನ್ ಪ್ರಸಾದ್‌ರ ಮಲೆಮಾದೇಶ್ವರ, ಎರಡೂ ಸಂಪಾದಿತ ಕಾವ್ಯಗಳ ನೆರವನ್ನು ಪಡೆಯಲಾಗಿದೆ. ಜೊತೆಗೆ ಅರವಿಂದ ಮಾಲಗತ್ತಿ, ಪ್ರೊ. ಡಿ. ಲಿಂಗಯ್ಯ, ಡಾ. ಬಿ.ಎಸ್. ಸ್ವಾಮಿ, ತೀ.ನಂ. ಶಂಕರನಾರಾಯಣ, ಸಿ.ಎನ್. ರಾಮಚಂದ್ರನ್ ಇವರ ಗ್ರಂಥಗಳ ನೆರವನ್ನು ಪಡೆಯಲಾಗಿದೆ.

# ಅಧ್ಯಾಯ - 2
# ಸ್ತ್ರೀವಾದಿ ನೆಲೆ

ಜನಪದ ಮತ್ತು ಶಿಷ್ಟ ಮಹಾಕಾವ್ಯಗಳ ಪೈಕಿ ಸ್ತ್ರೀ ಸಂವೇದನೆ ಅತ್ಯಂತ ಪರಿಣಾಮಕಾರಿಯಾಗಿ ಮೂಡಿಬಂದಿರುವುದು ಮಲೆಮಾದೇಶ್ವರ ಕಾವ್ಯದಲ್ಲಿಯೇ. ಕಾವ್ಯದ 'ಸಂಕಮ್ಮನ ಸಾಲು' ಪಠ್ಯಭಾಗದಲ್ಲಿ ಪುರುಷ ದಬ್ಬಾಳಿಕೆಯನ್ನು ಸ್ತ್ರೀ ಹೇಗೆ ಗ್ರಹಿಸುತ್ತಾಳೆ, ವಿರೋಧಿಸುತ್ತಾಳೆ ಮತ್ತು ತನ್ನ ಅಸ್ತಿತ್ವವನ್ನು ಹೇಗೆ ಸ್ಥಾಪಿಸುತ್ತಾಳೆ ಎನ್ನುವುದು ಅತ್ಯಂತ ಉತ್ಕಟವಾಗಿ ಚಿತ್ರಿತವಾಗಿದೆ. ಸಂಕಮ್ಮ ಇಡೀ ಸ್ತ್ರೀ ಸಮುದಾಯದ ಪ್ರತಿನಿಧಿಯಾಗಿದ್ದಾಳೆ. "ಮುಕ್ತತೆಯನ್ನು ಬಯಸುವ ಮಾತೃ ಮೂಲ ಬುಡಕಟ್ಟಿನ ಪಳಿಯುಳಿಕೆಯಾಗಿ ಸಂಕಮ್ಮ ಗೋಚರಿಸುತ್ತಾಳೆ" ಎಂದು ಹೀ.ಚಿ. ಬೋರಲಿಂಗಯ್ಯನವರು ಅಭಿಪ್ರಾಯಪಡುತ್ತಾರೆ. ಇಲ್ಲಿನ ಮುಕ್ತತೆ ಎನ್ನುವುದು ಸಹಜ ಸಮಾನತೆಯ ಸ್ವಾತಂತ್ರ್ಯ ಎಂದು ಧ್ವನಿತವಾಗುತ್ತದೆಯೇ ಹೊರತು ನೈತಿಕತೆ ಮತ್ತು ವ್ಯವಸ್ಥಿತವಲ್ಲದ ಸ್ವೇಚ್ಛಾಪ್ರವೃತ್ತಿ ಎಂದು ಅರ್ಥವಲ್ಲ. ಸ್ತ್ರೀವಾದಿ ಪದದ ಅರ್ಥವೇ ಸಮಾನತೆಯನ್ನು ಬಯಸುವುದು ಮತ್ತು ಪುರುಷ ದೌರ್ಜನ್ಯವನ್ನು ಖಂಡಿಸುವಂಹದ್ದು. ಈ ಎಲ್ಲ ಗ್ರಹಿಕೆಯ ಹಿನ್ನೆಲೆಯಲ್ಲಿಯೇ ಮತ್ತು ಇದಕ್ಕೆ ಪೂರಕವಾಗಿಯೇ ಮಲೆಮಾದೇಶ್ವರ ಕಾವ್ಯದ ಸಂಕಮ್ಮನ ಸಾಲು ಪಠ್ಯಭಾಗವನ್ನು ವಿಶ್ಲೇಷಿಸಲಾಗಿದೆ. ಜೊತೆಗೆ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ವಿವರಗಳನ್ನೂ ವೈಶಿಷ್ಟ್ಯಗಳನ್ನೂ ಗುರ್ತಿಸಲಾಗಿದೆ.

ಒಂದು ಬುಡಕಟ್ಟು ಸಮುದಾಯದವಾದ ಸೋಲಿಗರ ಸಾಂಸ್ಕೃತಿಕ ವಿವರಗಳನ್ನು ಸಂಕಮ್ಮನ ಸಾಲು ಪಠ್ಯಭಾಗ ನಮಗೆ ವಿವರಿಸುತ್ತದೆ. ಅವರ ಆಹಾರ ಪದ್ಧತಿ, ಬೇಟೆ, ಜೇನು ಸಂಗ್ರಹಣೆ, ಮದುವೆ, ಆಚರಣೆ, ಶೀಲ, ನಂಬಿಕೆ ಮೊದಲಾದವುಗಳನ್ನು ಸಮಗ್ರವಾಗಿ ಚಿತ್ರಿಸುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ವಿವರಗಳನ್ನು ಗುರುತಿಸುವುದರ ಜೊತೆಗೆ ಅದರ ವೈಶಿಷ್ಟ್ಯಗಳನ್ನೂ ಗುರುತಿಸಲಾಗಿದೆ.

ಸೋಲಿಗರ ಪೋಡಿನಲ್ಲಿ ವಾಸಿಸುವ ಸೋಲಿಗ ನೀಲೇಗೌಡನಿಗೆ ಏಳು ಜನ ಗಂಡು ಮಕ್ಕಳು. ಕಾವ್ಯದಲ್ಲಿ ಹಾಡಿರುವಂತೆ ಅವನು ಎಮ್ಮೆ ದನ, ಕುರಿ ಹಿಂಡುಗಳನ್ನು ಸಾಕುತ್ತಾ ಇರುತ್ತಾನೆ. ಏಳು ಗಂಡು ಮಕ್ಕಳಿಗೂ ಒಂದೊಂದು ಕೆಲಸಗಳನ್ನು ಹಂಚಿರುತ್ತಾನೆ. ಬುಡಕಟ್ಟು ಸಮುದಾಯಗಳು ಪಶುಪಾಲನೆಯಲ್ಲಿ ತೊಡಗಿರುವ ಹಂತ ಇದಾಗಿದೆ. ಇವರು ಪಶುಪಾಲನೆಯ ಜೊತೆಗೆ ಸಾಂಪ್ರದಾಯಿಕ ಕಸುಬುಗಳಾದ ಬೇಟೆ ಮತ್ತು ಜೇನು ಸಂಗ್ರಹಣೆಯನ್ನು ತಮ್ಮ ಜೀವನದ ಅವಿಭಾಜ್ಯ ಅಂಗವನ್ನಾಗಿಸಿಕೊಂಡಿದ್ದಾರೆ.

ಎಲ್ಲ ಜನಪದ ಕತೆಗಳಲ್ಲಿ ಬರುವಂತೆ ಇಲ್ಲೂ ಕೂಡ ಏಳು ಜನ ಮಕ್ಕಳು, ಏಳು ದೊಡ್ಡಿ ಎಮ್ಮೆ ಏಳು ದೊಡ್ಡಿ ದನ, ಏಳು ದೊಡ್ಡಿ ಕುರಿ ಹಿಂಡು ಇವುಗಳ ಉಲ್ಲೇಖ ಬರುತ್ತದೆ. ಏಳರ ಸಂಖ್ಯೆ ಒಂದು ಜನಪದ ಆಶಯವಾಗಿದೆ. ಏಳು ಎಂದರೆ ಎಚ್ಚೆತ್ತುಕೊ, ಜಾಗೃತನಾಗು, ಏಳಿಗೆಯನ್ನು ಹೊಂದು ಎಂಬ ಅರ್ಥ ಮತ್ತು ಆಶಯವಿದೆ. ಆದರೆ ಅರಣ್ಯ ವಾಸಿಗಳ ಜೀವನವೇ ಕಾಡುಪ್ರಾಣಿಗಳ ಜೊತೆ ಹೋರಾಟಕ್ಕಿಳಿದು

ತಮ್ಮನ್ನು ತಾವು ರಕ್ಷಿಸಿಕೊಳ್ಳುತ್ತಿರುವಾಗ ಇಷ್ಟೊಂದು ಪ್ರಮಾಣದ ಹೆಚ್ಚು ಪಶುಗಳನ್ನು ಸಾಕುತ್ತಿದ್ದರು ಎಂದು ಹೇಳುವುದು ಕೇವಲ ಉತ್ಪ್ರೇಕ್ಷೆ ಎಂದು ಪ್ರೊ. ಡಿ. ಲಿಂಗಯ್ಯನವರು ಅಭಿಪ್ರಾಯಪಡುತ್ತಾರೆ. ಅರಣ್ಯಾವೃತ ಪ್ರದೇಶಗಳಲ್ಲಿ ಹುಲಿಗಳ ಕಾಟದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಹೆಣಗುವ ಜನ ಪಶುಪಾಲನೆಯನ್ನು ಕಡಿಮೆ ಪ್ರಮಾಣದಲ್ಲಿ ಪ್ರಾರಂಭಿಸಿರಬಹುದು. ಮುಖ್ಯವಾದ ಅಂಶವೆಂದರೆ ಈ ಕಾವ್ಯವನ್ನು ಹಾಡುವವರೆಲ್ಲರೂ ಅರಣ್ಯವಾಸಿಗಳಾಗಿರದೆ ಊರುಗಳಲ್ಲಿ ನೆಲೆಸಿರುವ ಜನ. ಈ ಜನಪದ ಗಾಯಕರು ಜನಪದ ಕತೆ, ಗಾದೆ, ಲಾವಣಿ ಇವುಗಳನ್ನು ಬಲ್ಲವರಾದ್ದರಿಂದ ಕೆಲವು ಭಾಗಗಳು ವ್ಯತ್ಯಾಸಗೊಳ್ಳುವುದುಂಟು. ಅಂದರೆ ಬೇರೊಂದು ಜನಪದ ಕತೆಯ ಭಾಗಗಳನ್ನು ಕೂಡ ಅವರು ಮಾದೇಶ್ವರ ಕಾವ್ಯಕ್ಕೆ ತಂದು ಜೋಡಿಸುತ್ತಾರೆ. ಗಾಯಕರು ತಾವು ಬಡವರಾದರೂ ಕೂಡ ಅವರು ಪ್ರಸ್ತುತಪಡಿಸುವ ಕಾವ್ಯಗಳು ಮತ್ತು ಕತೆಗಳು ಶ್ರೀಮಂತವಾಗಿರುವಂತೆ ನೋಡಿಕೊಳ್ಳುತ್ತಾರೆ. ಉತ್ಪ್ರೇಕ್ಷೆ ಜನಪದದಲ್ಲಿ ಎದ್ದುಕಾಣುವ ಅಂಶ, ಮಕ್ಕಳ ವಿಚಾರಕ್ಕೆ ಬಂದರೂ ಕೂಡ ಕೊನೆಯ ಅಂದರೆ ಏಳನೆ ಮಗನಿಗೆ ಲಗ್ನವಿಲ್ಲ ಮತ್ತು ಅವನು ಇತರರಂತಲ್ಲ, ಅವನನ್ನು ಕಾವ್ಯ ಈ ರೀತಿ ಪರಿಚಯಿಸುತ್ತದೆ.

"ಮಲೆಯ ಸ್ವಾಮಿಗ ನೀಲೇಗೌಡ್ನ
ಕಿರಿಯ ಮಗ ನೀಲಯ್ಯ
ದೇವ್ರ ಸ್ವಾಮಿಗ ನೀಲಯ್ಯ
.....
ಮಂತುರಕಾರ ನೀಲಯ್ಯ
ತಂತುರಕಾರ ನೀಲಯ್ಯ
ಮಾಟ್ಲುಗಾರ ನೀಲಯ್ಯ
ಕೂಟ್ಲುಕಾಲ ನೀಲಯ್ಯ
ಕ್ಯಾಟ್ಲುಕಾರ ನೀಲಯ್ಯ
ಕ್ಯಾಣುಕಾರ ನೀಲಯ್ಯ
ದ್ರಿಷ್ಟಿಉಳ್ಳ ನೀಲಯ್ಯ
ಗಿಷ್ಟಿಉಳ್ಳ ನೀಲಯ್ಯ
ಚಂದಾದ ಮಗನು ನೀಲಯ್ಯ
ರೂಪೂರೇಖೆ ಸುದ್ದುಳ್ಳ ನೀಲಯ್ಯ
ಲಗ್ಗೂನ ವಿಲ್ವಲ್ಲೊ"[1]

ಕಿರಿಯ ಮಗನಾದ ನೀಲಯ್ಯ ಉಳಿದ ಆರು ಜನ ಮಕ್ಕಳಂತಲ್ಲ ಇವನು ಮಂತ್ರ, ತಂತ್ರ, ಮಾಟ, ಕೂಟ ಇವುಗಳ ಪರಿಣತನೂ ನಿಷ್ಠೆ ಉಳ್ಳವನ್ನೂ ಆಗಿದ್ದಾನೆ. ತಂದೆ-ತಾಯಿಗಳಿಗೆ, ಅಣ್ಣ-ಅತ್ತಿಗೆಯರಿಗೆ ಗೌರವವನ್ನು ಕೊಡುತಾನೆ. ಅವನಿಗೆ ಗುರು-ಹಿರಿಯರನ್ನು ಕಂಡರೆ ಅತ್ಯಂತ ಭಕ್ತಿ. ಒಂದು ಸಂದರ್ಭದಲ್ಲಿ "ದಾರಿಯಲ್ಲಿ ಬರುವಾಗ ಮಾದೇಶ್ವರರು ಬರುತ್ತಿರಲು ಯಾವ ಸೀಮೆಯ ದೇವಪುರುಷನೋ ಕಾಣೆ

ಬರುತ್ತಿದ್ದಾನಲ್ಲ, ಅವರ ಎದುರಿಗೆ ಪೋದ್ರೆ ಏನು ಕಳಂಕಕ್ಕೆ ಒಳಗಾದೇನೋ, ಏನು ಅನ್ಯಾಯಕ್ಕೆ ಒಳಗಾದೇನೋ, ಯಾವ ಪಾಪಕ್ಕೆ ಗುರಿಯಾದೇನೊ ಅವರ ಎದುರಿಗೆ ಹೋಗಬಾರದು" ಎಂದು ಆ ದಾರಿ ಬಿಟ್ಟು ಬೇರೆ ಕಡೆ ಹೋಗುವುದನ್ನು ನೋಡಿದರೆ ಗುರು-ಹಿರಿಯರಲ್ಲಿ ಆತನಿಗೆ ಅಧಿಕ ಭಕ್ತಿ ಗೌರವ ಇತ್ತು ಎಂಬುದನ್ನು ತೋರುತ್ತದೆ."[2] ಇಲ್ಲಿ ಒಂದು ದೃಷ್ಟಿಯಿಂದ ನೀಲಯ್ಯನ ಗುಣ ತಿಳಿದರೆ, ಮತ್ತೊಂದು ನೆಲೆಯಲ್ಲಿ ಮಾದೇಶ್ವರ ತಾನು ಎದುರಿನವರಿಗೆ ಪರಿಚಯವಿಲ್ಲದಿದ್ದರೂ ಕೂಡ ತಾನು ಕಾರಣಿಕ ಪುರುಷ ಎಂದು ಅವರಿಗೆ ತಿಳಿಯುವುದು ನೋಡಿದರೆ ಮಾದೇಶ್ವರನ ಪ್ರಭಾವ ಎಷ್ಟೆಂದು ತಿಳಿಯುತ್ತದೆ. ಸಾಮಾನ್ಯ ಮನುಷ್ಯನಿಂತಿದ್ದರೂ ಮಾದೇಶ್ವರ ಕಾರಣಿಕ ಪುರುಷನಾಗಿರುವುದು ಪ್ರಧಾನವಾಗಿ ಕಾಣುತ್ತದೆ.

ನೀಲಯ್ಯನು ತನ್ನ ಅಣ್ಣ ಅತ್ತಿಗೆಯರ ಬಗ್ಗೆ ತುಂಬ ಗೌರವವುಳ್ಳವನಾಗಿದ್ದಾನೆ. ಅವರು ಹೇಳಿದ ಮಾತಿಗೆ ಪ್ರತಿ ಉತ್ತರ ಹೇಳದೆ ಕೆಲಸಗಳನ್ನು ಮಾಡುತ್ತಾನೆ. ಈ ಕಾರಣಕ್ಕಾಗಿಯೇ ಅವನ ಅತ್ತಿಗೆಯರು ಪ್ರೀತಿಯಿಂದ ಅವನಿಗೆ ಊಟಕ್ಕೆ ಕರೆಯುತ್ತಾರೆ. ಊಟವನ್ನು ಬಡಿಸುತ್ತಾರೆ. ವಿಶೇಷ ಮಮತೆಯನ್ನು ಹೊಂದಿದ್ದಾರೆ. ಹೀಗೆ ಇರುವ ಕುಟುಂಬದಲ್ಲಿನ ಅತಿ ಚಿಕ್ಕ ವಿವರಗಳನ್ನೂ ಕೂಡ ಕಾವ್ಯ ನಮಗೆ ಒದಗಿಸುತ್ತದೆ. ಆ ಮೂಲಕ ಪಶುಪಾಲನೆಗೆ ಹತ್ತಿರವಾಗುತ್ತಿರುವ ಬುಡಕಟ್ಟು ಸಮುದಾಯದ ಜೀವನ ವಿವರಗಳನ್ನು ಕಾವ್ಯ ನಮಗೆ ಒದಗಿಸುತ್ತದೆ. ನೀಲಯ್ಯ ದನ ಕುರಿಗಳನ್ನು ಮೇಯಿಸಲು ಹೊರಡುವಾಗಿನ ಸಿದ್ಧತೆಯನ್ನು ಹೀಗೆ ವರ್ಣಿಸಿದೆ.

"ರಾಗಿಹಿಟ್ಟನ್ನು ಕಟ್ಕೊಂಡು ಹುರುಳಿಕಾಳನ್ನು ತುಂಬ್ಕೊಂಡು ಗುರುವೆ
ಒಂದು ಬೂದುಗಂಬಳಿ ತಗುದವುನೆ
ಅವನ ಹೆಗಲಮೇಲೆ ಮಡಗವುನೆ
ಬಂದಣ್ಕಟ್ಟ ದೊಣ್ಣೆ ತಗುದವುನೆ
ಒಂದಿಚು ಮುಟ್ಟದ್ ಜೋಡ ಮೆಟ್ಟವುನೆ
ಸರಳೆಮ್ಮೆ ದೊಡ್ಡಿಗೆ ಬಂದವುನೆ
ಎಮ್ಮೆಗಳ ಬುಟ್ಟವುನೆ
....................
ಕಾಡೂಪೋಡೂನೊಳಿಗೆ ಗುರುವೆ
ಅಟ್ಕೊಂದಟ್ಕೊಂಡ್ ಬರ್ತಾನೆ"[3]

ಇಲ್ಲಿನ ವಿವರಗಳು ಸೋಲಿಗ ಜೀವನ ಕ್ರಮದಲ್ಲಿನ ಅಂದರೆ ಬುಡಕಟ್ಟು ಜನರ ಸಾಂಸ್ಕೃತಿಕ ಅಂಶಗಳನ್ನು ತಿಳಿಸುತ್ತದೆ. ಹೀಗೆ ತಿಳಿಸಿದಾಗಲೇ ಒಂದು ಜನಪದ ಮಹಾಕಾವ್ಯ ಒಂದು ಬುಡಕಟ್ಟು ಸಮುದಾಯದ (ಜನಾಂಗದ) ಸಾಂಸ್ಕೃತಿಕ ಚರಿತ್ರೆಯಾಗುತ್ತದೆ.

ನೀಲಯ್ಯನು ತಂದೆ-ತಾಯಿಗಳು ನೋಡಿದ ಹೆಣ್ಣನ್ನು ಮದುವೆಯಾಗಲು ಒಪ್ಪುವುದಿಲ್ಲ. ಆಗ ಅವರು

ನೀಲಯ್ಯನಿಗೆ ನೀನು ಒಪ್ಪುವ ಹೆಣ್ಣನ್ನು ಹುಡುಕಿಕೊಂಡು ಬಾ ನಾವು ಮದುವೆ ಮಾಡುತ್ತೇವೆ ಎನ್ನುತ್ತಾರೆ. ಆ ಸಮಯದಲ್ಲಿ ಅವನ ಅತ್ತಿಗೆಯರು 'ಎಂತ ಬಿದ್ರೆ ಒಳಗ್ಲು ಚದ್ರೆ ತತ್ತನೂ' ಎಂದು ಅಣಕಿಸುತ್ತಾರೆ. ಆಗ ನೀಲಯ್ಯನು "ಎಂತೆ ಕರ್ಚ್ಲುವೆ ತಂದು ಮದುವೆಯಾಯ್ತನೂ ಆಂತ್ವೇಳಿ ನನ್ನನ್ನು ಜರ್ದು ಮಾತಾಡ್ಬುಟ್ರಲ್ಲ ಪರಮಾತ್ಮ ಆಂತ ಕರ್ ಚಲುವೇನೇ ತಂದೆ ಮದುವೆಯಾಗ್ಬೇಕು ಇಲ್ದೆಹೋದ್ರೆ ಮದ್ವೇನೆ ಆಗ್ಬಾರ್ದು"[4] ಎಂದು ನಿಶ್ಚಯಿಸುತ್ತಾನೆ. ಈ ಛಲ ಅವನು ಎಷ್ಟು ಸ್ವಾಭಿಮಾನಿ ಎಂದು ತೋರಿಸುತ್ತದೆ. ಮದುವೆ ಅನಂತರದಲ್ಲಿ ಕೂಡ ಇಂತಹದ್ದೇ ನಿಶ್ಚಿತಮತಿಯಾಗಿರುತ್ತಾನೆ. ನೀಲಯ್ಯ ತನಗೆ ಒಪ್ಪುವ ಹೆಣ್ಣನ್ನು ಹುಡುಕಲು ಆರಂಭಿಸುತ್ತಾನೆ. ದನ ಕುರಿ ಮೇಯಿಸಲು ಹೋದಾಗ ಅವನು ತುಂಬ ಯೋಚಿಸುತ್ತಾನೆ. ಮಧ್ಯಾಹ್ನದ ಬಿಸಿಲಿನಲ್ಲಿ ಅವನಿಗೆ ಬಹಳ ದಾಹವಾಗುತ್ತದೆ. ಅಲ್ಲಿ ಯಾವ ಕೆರೆ ಕುಂಟೆ ಕೊಳ ಒಂದೂ ಕಾಣುವುದಿಲ್ಲ ನೀರು ಸಿಗದ ನೀಲಯ್ಯ ಕಲ್ಬಂಡೆ ಮೇಲೆ ನಿಂತುಕೊಂಡು ಸುತ್ತಲೂ ನೋಡುತ್ತಾನೆ. ಆಗ ದೂರದ ಒಂದು ಸೋಲಿಗರ ದೊಡ್ಡಿಯಲ್ಲಿ ಒಂದುಸೂಜಿಗಾತ್ರದ ಹೊಗೆ ಏಳುವುದು ಕಾಣಿಸುತ್ತದೆ. ಆಗ ಅಲ್ಲಿಗೆ ಹೋಗುತ್ತಾನೆ. ಅದು ತುಂಬೆ ಸೋಲಿಗರ ದೊಡ್ಡಿಯಾಗಿರುತ್ತದೆ. ತುಂಬೆ ಸೋಲಿಗನಿಗೆ ತಾನು ಕಾಡು ಸೋಲಿಗ ನೀಲೇಗೌಡುನ ಮಗ ಮಲೆಸೋಲಿಗ ನೀಲೇಗೌಡ ಎಂದು ಪರಿಚಯಿಸಿಕೊಳ್ಳುತ್ತಾನೆ. ನಂತರ ನೀರು ಕೇಳಲು ತುಂಬೇಸೋಲಿಗನ ಮಗಳಾದ ಸತ್ಯುಭಾವ ಸಂಕಮ್ಮ ನೀರನ್ನು ತಂದುಕೊಡುತ್ತಾಳೆ. ನೀರನ್ನು ಕುಡಿದ ನೀಲಯ್ಯನು ಶರಣೆ ಸಂಕಮ್ಮನ ಚೆಲುವನ್ನು ಕಂಡು ಇಷ್ಟಪಡುತ್ತಾನೆ. ಇವಳನ್ನೇ ಮದುವೆಯಾಗಬೇಕೆಂದು ನಿರ್ಧರಿಸುತ್ತಾನೆ. ತಂದೆ ತಾಯಿಗಳಿಗೆ ವಿಷಯವನ್ನು ತಿಳಿಸುತ್ತಾನೆ. ಸಂಕಮ್ಮ ಅಂದವಾದ ಚಂದವಾದ ಕಡುಚೆಲುವೆ ಗುಣವಂತೆ ಎಂದು ತಿಳಿಸುತ್ತಾನೆ. ಇದರಿಂದ ತಂದೆ-ತಾಯಿಗಳಿಗೂ ಕೂಡ ಸಂತೋಷವಾಗುತ್ತದೆ.

ಗಮನಿಸಬೇಕಾದ ಅಂಶವೆಂದರೆ ನೀಲಯ್ಯನ ಅಣ್ಣಂದಿರೆಲ್ಲರೂ ಕೂಡ ತಂದೆ-ತಾಯಿಗಳು ನೋಡಿದ ಹೆಣ್ಣನ್ನೇ ಮದುವೆಯಾಗುತ್ತಾರೆ. ಆದರೆ ನೀಲಯ್ಯನು ಮಾತ್ರ ತನಗೆ ಇಷ್ಟವಾದ ಹೆಣ್ಣನ್ನು ತಾನೇ ಹುಡುಕಿಕೊಳ್ಳುತ್ತಾನೆ. ಆ ಸ್ವಾತಂತ್ರ್ಯವನ್ನು ಅವನಿಗೆ ತಂದೆ-ತಾಯಿಗಳು ಕೊಟ್ಟಿರುತ್ತಾರೆ. ನೀಲಯ್ಯನು ಕಿರಿಯ ಮಗನಾದರೂ ಕೋಪಿಷ್ಠ, ಮಂತ್ರಗಾರ, ತಂತ್ರಗಾರ ಉಳಿದವರಂತಲ್ಲ. ಹೀಗಾಗಿ ಇವನಿಗೆ ಒತ್ತಾಯ ಮಾಡಲಾಗುವುದಿಲ್ಲ. ಜನಪದ ಮನಸ್ಸು ಏಳನೇ ಮಗನಿಗೆ ವಿಶೇಷ ಸ್ಥಾನವನ್ನು ನೀಡುತ್ತದೆ. ತನ್ನ ಹೆಂಡತಿಯನ್ನು ತಾನೇ ಹುಡುಕಿಕೊಂಡರೂ ನೀಲಯ್ಯ ತನ್ನ ತಂದೆ-ತಾಯಿಗಳ ಒಪ್ಪಿಗೆಯ ಮೇರೆಗೆ ಅವರೇ ನಿಂತು ಮದುವೆ ಮಾಡಿಸುವಂತೆ ಮಾಡುತ್ತಾನೆ. ಅಷ್ಟು ಸಂಯಮ ತೋರುತ್ತಾನೆ. ಏಕೆಂದರೆ ಈ ಮೊದಲೇ ಹೇಳಿದಂತೆ ಅವನು ಹಿರಿಯರಲ್ಲಿ ಭಕ್ತಿ ಇಟ್ಟಿರುವವನು. ಈ ವೇಳೆಗಾಗಲೇ ಬುಡಕಟ್ಟು ಸಮುದಾಯಗಳಲ್ಲಿ ಮಾತೃ ಪ್ರಧಾನ ವ್ಯವಸ್ಥೆ ಕ್ರಮೇಣ ಸಡಿಲವಾಗುತ್ತಿರುವುದನ್ನು ಕಾಣಬಹುದು. ಇಲ್ಲಿ ನೀಲಯ್ಯನೇ ಸರ್ವೋಚ್ಚನಾಗಿದ್ದಾನೆ. ನೀಲಯ್ಯನ ಇಷ್ಟದಂತೆ ಹೆಣ್ಣನ್ನು ಕೇಳಲು ತಂದೆ-ತಾಯಿಗಳ ಅಣ್ಣ-ತಮ್ಮಂದಿರು ಐದು ಜನ ಮುತ್ತೈದೇರ ಜೊತೆಗೆ ಸಂಕಮ್ಮನನ್ನು ನೋಡಲು ಬರುತ್ತಾರೆ. ಸಂಕಮ್ಮನ ತಂದೆ ತುಂಬೆ ಸೋಲಿಗ ನೀಲಯ್ಯನ ತಾಯಿ ನಂಜಮ್ಮನಿಗೆ ನನ್ನ ಮಗಳಾದ ಸಂಕಮ್ಮನನ್ನು ಒಂದೇಟ್ ಹೊಡೀದಂತೆ ಒಂದು ಬೈಗುಳ ಬೈದಂಗೆ ಸಾಕಿದ್ದೀನಿ. ಅದೇ ತರವಾಗಿ ಸಾಕೋದಾದರೆ ಒಪ್ಪಿಗೆ ಎನ್ನುತ್ತಾನೆ. ಇಳ್ಳೇಶಾಸ್ತ್ರಕ್ಕೆ ಒಪ್ಪಿಗೆ ಸೂಚಿಸುತ್ತಾನೆ. ಬುಡಕಟ್ಟು

ಜನಾಂಗದಲ್ಲೂ ಕೂಡ ಮದುವೆ ಅನ್ನುವುದು ಹೆಣ್ಣುಗಂಡುಗಳ ಪರಸ್ಪರ ಒಪ್ಪಿಗೆಯನ್ನು ಒಳಗೊಳ್ಳಬೇಕಾಗಿತ್ತು. ಇದು ಸಾಮಾಜಿಕ ಮನ್ನಣೆಯನ್ನೂ ಕೂಡ ಗಳಿಸಬೇಕಾಗಿತ್ತು.

ಮದುವೆ ಏರ್ಪಾಡನ್ನು ಮಾಡುತ್ತಾರೆ. ಆ ಸಂದರ್ಭದಲ್ಲಿನ ವಿವರಗಳು ಮದುವೆಯಲ್ಲಿನ ಆಚರಣೆಗಳನ್ನು ನೀಡಿದೆ. ಕಾವ್ಯವೇ ಹೇಳುವಂತೆ :

"ಕುಲುದೋರು ಜಾತೀರು ಮತುದೋರ್ನೆಲ್ಲ ಕರ್ದು
ನಂಟರಿಷ್ಟ ಬಂಧು ಬಳಗನೆಲ್ಲ ಕರ್ದು
ಒಂದೊಪ್ಪು ಮಾತ ಮಾಡವುರೆ
ಬಂದರು ಸಿಣ ಬಾಳಣ್ಣ ಮಡ್ಗವುರೆ
ಒಂದನ್ನೆರ್ಡ್ಡು ಕುಂಬ ನೆಟ್ಟವರೆ
ಒಂದು ಸೀತಾಳ ಚಪ್ರ ಹಾಕವುರೆ
.................
ಐದುಕೊಂಬುನರುಸ್ಣ ತಂದವುರೆ
ಕಬ್ಬುಣದುಂಗರ ತಂದವರೆ"[5]
"ಬಾರಿ ದೋಯಿಸ್ರು ಬಂದವರೆ
ಧಾರೆ ನಾದರೆ ಹುಯ್ದವರೆ
ಹೆಣ್ಣೆಸ್ರ ಗಂಡು ಹೇಳವ್ನೆ
ಗಂಡಸ್ರ ಹೆಣ್ಣು ಹೇಳವ್ಳೆ
ಅವ್ನು ತೇಜಿ ಮ್ಯಾಲೆ ಕುಂತವ್ನೆ
ಇವ್ಳು ಬಸುವನ ಮ್ಯಾಲೆ ಕುಂತವುಳೆ
ಆ ಪೋಡಿಗೀಪೋಡಿಗೋಗವ್ರೆ
ಸಬ್‌ಗಸ್ತನಾದರೆ ಮಾಡವ್ರೆ
ದಾಯಿಂದ ಕಾರರ ದೊಡ್ಡೇಲಿ ಗುರುವೆ
ದಂಪತಿಗಳ ತಂದು ಇರುಸವ್ರೆ"[6]

ಈ ಎಲ್ಲ ವಿವರಗಳನ್ನೂ ಆಚರಣಾತ್ಮಕ ದೃಷ್ಟಿಯಿಂದ ನೋಡಿದರೆ ಬುಡಕಟ್ಟು ಸಮುದಾಯದಲ್ಲಿರುವ ಮದುವೆಯು ಬಗ್ಗೆ ಸಮಗ್ರ ಚಿತ್ರಣ ದೊರೆಯುತ್ತದೆ. ಮದುವೆ ಸಾಮಾಜಿಕ ಸಮ್ಮತಿಯನ್ನು ಪಡೆದುಕೊಳ್ಳಬೇಕಾಗಿರುವುದರಿಂದ ಮತದವರನ್ನು, ಬಂಧು ಬಳಗದವರನ್ನು ಸೇರಿಸುವುದು ಅಗತ್ಯವಾಗಿದೆ. ಒಂದು ಅರಿಸಿಣ, ಒಂದು ಬಾಳೆಹಣ್ಣು ಕಬ್ಬಿಣದ ಉಂಗುರ ಇತ್ಯಾದಿಗಳು ಆಚರಣಾತ್ಮಕ ನಂಬಿಕೆಗಳಿಗೆ ಸಂಬಂಧಿಸಿವೆ. ಮದುವೆ ಸಂದರ್ಭದಲ್ಲಿ ಗಂಡಿನ ಹೆಸರನ್ನು ಹೆಣ್ಣು ಹೇಳುವುದು, ಹೆಣ್ಣಿನ ಹೆಸರನ್ನು ಗಂಡು

ಹೇಳುವುದು ಇದೆ. ಅವರ ನಡುವೆ ಸಾಮರಸ್ಯ ಸಲಿಗೆ ಉಂಟಾಗಲೆಂದು ಹೀಗೆ ಮಾಡುತ್ತಾರೆ. ಮದುವೆಯ ನಂತರದ ಆಚರಣೆಗಳೂ ಕೂಡ ಗಮನಸೆಳೆಯುವಂತಹವು.

ಮದುವೆಯಾದ ಮೇಲೆ ಮೂರು ದಿವಸಕ್ಕೆ ನೀಲಯ್ಯ ತನ್ನ ಹೆಂಡತಿ ಸಂಕಮ್ಮನನ್ನು ಮನೆಗೆ ಕರೆದುಕೊಂಡು ಬರುತ್ತಾನೆ. ಮನೆಗೆ ಬಂದ ಮೇಲೆ ಹೇಗೆ ಬಾಳುವೆ ಮಾಡಬೇಕೆಂದು ನೀಲಯ್ಯ ಸಂಕಮ್ಮನಿಗೆ 'ತುಂಬಿದ ಮನೆಗೆ ಲಗ್ನವಾಗಿದ್ದೀ ನೀನು, ಅತ್ತೆ ಮಾವ್ದೀರು ಕಾಲಲ್ಲಿ ಹೇಳಿದ ಕೆಲ್ಸ ಕೈಯಲ್ ಮಾಡಬೇಕು' ಎನ್ನುತ್ತಾನೆ. ಇಲ್ಲಿ ಗಂಡು ಹೇಳಿದಂತೆ ನೀನು ಕೇಳಬೇಕು ಎಂದು ಹೆಣ್ಣಿಗೆ ಹೇಳುವುದರ ಜೊತೆಗೆ, ತುಂಬಿದ ಮನೆಯಲ್ಲಿ ಹೆಣ್ಣಿನ ಜವಾಬ್ದಾರಿಯನ್ನು ತಿಳಿಸುತ್ತಿದ್ದಾನೆ. ಅತ್ಯಂತ ಚಲುವೆಯಾದ ಸಂಕಮ್ಮನನ್ನು ಮದುವೆಯಾದ ಮೇಲೆ ನೀಲಯ್ಯ ಮೊದಲು ಯಾವ ರೀತಿ ತನ್ನ ಕುಟುಂಬದೊಂದಿಗೆ ಇದ್ದನೋ ಅದೇ ರೀತಿಯಲ್ಲಿ ಇದ್ದಾನೆ, ಸಂಕಮ್ಮ ಕೂಡ ಅತ್ತೆ-ಮಾವ, ಭಾವಂದಿರು ಅವರ ಹೆಂಡತಿಯರೊಂದಿಗೆ ಗೌರವದಿಂದ ಇದ್ದಾಳೆ. ಹೀಗಿರುವಾಗ ತುಂಬಿದ ಕುಟುಂಬದಲ್ಲಿ ಸಂಕಮ್ಮ ಯಾವ ಕೆಲಸವನ್ನು ಮಾಡುತ್ತಿರಲಿಲ್ಲ. ಅವನ ಅತ್ತಿಗೆಯರು ಸಂಕಮ್ಮನನ್ನು ಅಣಕಿಸಲು ಮುಂದಾಗುತ್ತಾರೆ.

"ಕುಂತ್ ಜಾಗಕ್ಕೆ ಇವುಳ್ಗೆ ನೀರ್ತಂದ್ ಕೊಡ್ಬೇಕಲ್ಲ
ನಿಂತ್ ಜಾಗುಕ್ಕೆ ಇವುಳ್ಗೆ ನೀರ್ತಂದ್ ಕೊಡ್ಬೇಕಲ್ಲ
ನೀಲೇಗೌಡ ಬಿದ್ರೆ ಒಳುಗ್ಲ ಚದ್ರೆ ತರ್ಬೇಕು ಅಂತ್ಹೇಳಿ
ಎಂತೆ ಕಾಗೆ ಮೊಕದೋಳ್ ಗೂಗೆ ಮೊಕುದೋಳ್ ತಂದ"[7]

ಹೀಗೆ ಅಣಕಿಸುತ್ತಾರೆ. ತುಂಬಿದ ಕುಟುಂಬದಲ್ಲಿ ಹೀಗೆ ನುಡಿಯುವುದು ಸಹಜ ಎಂದು ಕೆಲವರ ನಂಬಿಕೆ. ದೇವರನ್ನು ಮೆಚ್ಚಿಸದರೂ ಜನಗಳನ್ನು ಮೆಚ್ಚಿಸಲು ಸಾಧ್ಯವಿಲ್ಲ ಎಂದು ಜನಪದರು ನಂಬುತ್ತಾರೆ. ಸಂಕಮ್ಮ ಹೇಗಿದ್ದರೂ ಓರಗಿತ್ತಿಯರು ಪ್ರಾಯಶಃ ಆಕೆಯ ಸೌಂದರ್ಯದ ಬಗೆಗಿನ ಅಸಹನೆಯ ದ್ಯೋತಕವಾಗಿರಬಹುದು. ಮಾನಸಿಕ ಹಿಂಸೆಗೆ ಮುಂದಾಗುತ್ತಾರೆ. ಹೀಗೆ ಶೋಷಣೆಗೆ ಒಳಗಾಗುವವರು ಮುಂದೆ ಯಾವುದೊ ಅಸಾಮಾನ್ಯವಾದ ಘಟನೆಯಲ್ಲಿ ಭಾಗಿಗಳಾಗುತ್ತಾರೆ. ಅಥವ ಅಸಮಾನ್ಯ ಘಟನೆ ನಡೆಸುತ್ತಾರೆ. ಏಕೆಂದರೆ ಜನಪದ ಕತೆ ಕಾರ್ವ್ಯ ಇವುಗಳಲ್ಲಿ ಬರುವ ನಾಯಕ ನಾಯಿಕೆಯರೆಲ್ಲರೂ ಕೂಡ ಪ್ರಾರಂಭದಲ್ಲಿ ಅತ್ಯಂತ ನಿರ್ಲಕ್ಷ್ಯಕ್ಕೆ ಹೀಯಾಳಿಕೆಗೆ ಒಳಗಾಗಿರುವವರೇ ಆಗಿರುತ್ತಾರೆ.

ಉದಾಹರಣೆಗೆ ಮಾದೇಶ್ವರನಿಗೆ ಮೊದಲು ತನ್ನ ತಂದೆ-ತಾಯಿಗಳನ್ನು ಹುಡುಕಿಕೊಳ್ಳಲು ಒದಗುವ ಅನಿವಾರ್ಯ ಸ್ಥಿತಿ, ಆ ತಾಯಿಯೂ ಕೂಡ ಎದುರಿಸುವ ಅನೇಕ ಸಮಸ್ಯೆಗಳು, ಅವರು ಆಶ್ರಯ ಬೇಡಿ ಬಂದ ಮಠದಲ್ಲಿನ ಶಿಷ್ಯರು ಇವರಿಗೆ ನೀಡಿದ ಕಿರುಕುಳ : ಇವರ ಬಗ್ಗೆ ಇದ್ದ ಅಸಹನೆ.

ಸಂಕಮ್ಮ ನೀಲಯ್ಯನನ್ನು ಮದುವೆಯಾಗಿ ಅನೇಕ ದಿನಗಳಾದರೂ ಮಕ್ಕಳಾಗುವುದಿಲ್ಲ. ಈ ಸಂಗತಿ ವಾರಗಿತ್ತಿಯರಿಗೆ ಅವಳನ್ನು ಶೋಷಿಸಲು ಇನ್ನಷ್ಟು ಪುಷ್ಟಿಕೊಡುವ ಸಂಗತಿಯಾಗುತ್ತದೆ. ಪ್ರಾಯಶಃ

ಮಕ್ಕಳಿಲ್ಲದವರನ್ನು ಅತ್ಯಂತ ಅವಮಾನಿಸುವ ಮನುಷ್ಯರಿರುವುದು ಭಾರತದಲ್ಲಿಯೇ ಇರಬೇಕು. ಅವಳನ್ನು ಬಂಜೆ ಎಂದು ಜರಿದು ಎಲ್ಲ ಶುಭ ಸಂದರ್ಭಗಳಿಗೆ ಕರೆಯಲ್ಪಡುವ ಸನ್ನಿವೇಶಗಳಲ್ಲಿ ಅವಳನ್ನು ದೂರ ಇಡುತ್ತಾರೆ. ಸಂಕಮ್ಮನನ್ನು ಜರೆಯುವ ಮಾತುಗಳ ನಿಜಕ್ಕೂ ಹರಿತವಾದವು. ಅವಮಾನಿತವಾದುವು. ಹೆಣ್ಣಿಗೆ ಹೆಣ್ಣೇ ಶತ್ರು ಎನ್ನುವ ಮಾತು ಈ ಸನ್ನಿವೇಶದಲ್ಲಿ ಬೇರೆಲ್ಲ ಸಂದರ್ಭಗಳಿಗಿಂತ ಹೆಚ್ಚು ಅನ್ವಯವಾಗುತ್ತದೆ.

"ಸಂಕಮ್ಮ ಹುಟ್ಟಿ ಮುವ್ವತ್ತು
ಮಂಡೆ ಮಾಸಿ ಹನ್ನೆರಡು
ಮೈಯಾನು ಬಣ್ಣ ಕೆಡನಿಲ್ಲ
ಮೊಕಾದ ಕಾಂತಿ ತಪ್ಪಲಿಲ್ಲ
ಮಕ್ಕಳ ಫಲವೇ ಮೊದಲಿಲ್ಲ
ಇವಳಿಟ್ಟ ಅಡುಗೆ ಉಂಡಾರೆ
ನಾವು ಬಂಜೇರಾಯ್ತೀವಿ
ಇವ್ರು ತೆಟ್ಟ ಬಟ್ಟೆ ತೊಟ್ವಾರೆ
ನಾವು ಬಂಜೇರಾಯ್ತೀವಿ
...........
ಹುಟ್ಟು ಬಂಜೆ ಸಂಕೆಣ್ಣು
ದಟ್ಟ ಧರಣಿ ಸಂಕೆಣ್ಣು
ನಮ್ಮ ಮಕ್ಕಳ ಇವ್ರು ಮುಟ್ಟಿದರೆ
ನಮ್ಮ ಮಕ್ಕಳು ಬಂಜೇರಾಯ್ತಾರೆ"[8]

ಮದುವೆಯಾದ ಮೇಲೆ ಮಕ್ಕಳಾಗಲೇಬೇಕು. ಇಲ್ಲವಾದರೆ ಹೆಣ್ಣು ಪರಿಪೂರ್ಣಳಲ್ಲ. ಅವಳಲ್ಲಿ ದೋಷವಿದೆ. ಅವಳು ಪುಣ್ಯಕಾರ್ಯಗಳಲ್ಲಿ ಭಾಗಿಯಾಗಲು ಯೋಗ್ಯಳಲ್ಲ ಎಂಬುದು ಜನಪದ ನಂಬಿಕೆ. ಅವಳು ಇದ್ದರೆ, ಅವಳು ಎದಿರುಗೊಂಡರೆ ಅಶುಭ ಎಂಬ ನಂಬಿಕೆ ಜನಗಳದ್ದು, ಹೀಗಾಗಿ ಇದಕ್ಕೆ ಹೊರತಾಗಿರದ ಸಂಕಮ್ಮನ ಓರಗಿತ್ತಿಯರು ಇವಳನ್ನು ಈ ಪರಿಯಾಗಿ ಜರೆಯುತ್ತಾರೆ. ಅವಳನ್ನೂ ಮಾತು ಮಾತಿಗೂ ಬಂಜೆ, ಬಂಜೆ ಎಂದು ಅವಳೊಬ್ಬಳೇ ಇದ್ದಾಗ ಮಾತನಾಡುತ್ತಾರೆ. ಅವಳೊಂದಿಗೆ ಊಟ ಮಾಡುವುದಿಲ್ಲ. ಸೌದೆಗೆ ಹೋಗುವುದಿಲ್ಲ. ಅವಳು ಬೇಯಿಸಿದ ಸುಣ್ಣವನ್ನು ಬಳಸುವುದಿಲ್ಲ. ಅವಳ ಜೊತೆ ದನಗಳನ್ನು ಹೊಡೆದರೆ ಅವು ಬಂಜೆಯಾಗುತ್ತವೆ ಎಂದು ಹೇಳುತ್ತಾರೆ. ಅವಳು ಮೀದ ನೀರನ್ನು ದಾಟಿದರೆ ನಾವು ನಮ್ಮ ಮಕ್ಕಳು ಬಂಜೆಯಾಗುತ್ತೇವೆ ಎಂದು ಅವರ ನಂಬಿಕೆ. ಹೀಗೆ ವಿಧ ವಿಧವಾಗಿ ಸಂಕಮ್ಮಳನ್ನು ಜರಿಯುತ್ತಾರೆ. ಈ ಸನ್ನಿವೇಶ ಕಾವ್ಯದಲ್ಲಿಯೇ ಅತ್ಯಂತ ಹೃಯದಯಸ್ಪರ್ಶಿಯಾಗಿ ಕರುಣಪೂರಿತ ಭಾಗವಾಗಿದೆ.

ಸಂಕಮ್ಮ ಅತ್ಯಂತ ದುಃಖವನ್ನು ಅನುಭವಿಸುತ್ತಾಳೆ. ಏಕೆಂದರೆ ಅದನ್ನು ಬಿಟ್ಟು ಅವಳು ಇನ್ನೇನನ್ನೂ ಮಾಡಲಾರಳು. ಅತ್ಯಂತ ಅಸಹಾಯಕವಾದ ಸನ್ನಿವೇಶ. ಹೆಣ್ಣಿನ ಮನದಾಳದ ನೋವನ್ನು ಅವಳು ಮಾತ್ರ

ಬಲ್ಲಳು. ಇಂತಹ ದಾಯಾದಿಗಳ ಮನೆಗೆ ನಾನು ಮದುವೆಯಾಗಿ ಬಂದನಲ್ಲ ಎಂದು ಮರುಗುತ್ತಾಳೆ. ಶಿವನಿಗೆ ತನ್ನ ದುಃಖವನ್ನು ಹೇಳಿಕೊಳ್ಳುತ್ತಾಳೆ ಏಕೆಂದರೆ ಅವಳ ಪಾಲಿಗೆ ಅಲ್ಲಿ ದೇವರ ಹೊರತಾಗಿ ಮತ್ತಾರೂ ಇಲ್ಲ. ತಂದೆ-ತಾಯಿ ಇದ್ದರೆ ಬಂಧು-ಬಳಗ, ಗೆಳತಿಯರು ಇದ್ದರೆ ಅವರೊಂದಿಗೆ ನನ್ನ ಕಷ್ಟವನ್ನು ಹೇಳಿಕೊಳ್ಳುತ್ತಿದ್ದೆ ಎಂದು ದೇವರಿಗೆ ನಿವೇದಿಸುತ್ತಾಳೆ. ಕಡುವೆ, ಕಾಡೆಮ್ಮೆ, ಇರುವೆ ಎಲ್ಲಾ ಜೀವರಾಶಿಗಳಿಗೂ ಮಕ್ಕಳನ್ನು ಕೊಟ್ಟೆ ನನಗೊಂದು ಕೊಡಬಾರದಿತ್ತೆ ಎಂದು ಗೋಗರೆಯುತ್ತಾಳೆ. ಒಬ್ಬರನ್ನು ಅಳಿಸೋದು ಒಬ್ಬರನ್ನು ನಗಿಸೋದು ತರವೇನೋ? ಎಂದು ದೇವರನ್ನು ಪ್ರಶ್ನಿಸುತ್ತಾಳೆ. ತನ್ನ ಪಾಲಿಗಾಗಿ, ಮಕ್ಕಳಿಗಾಗಿ ಹಂಬಲಿಸುತ್ತಾಳೆ. ದೇವರ ತಾರತಮ್ಯ ಪಕ್ಷಪಾತವನ್ನು ಪ್ರಶ್ನಿಸುತ್ತಾಳೆ. ಮತ್ತೊಂದು ವೈರುಧ್ಯವೆಂದರೆ ಹೀಗೆ ದಿಟ್ಟೆಯಾಗಿ ಪ್ರಶ್ನಿಸುತ್ತಲೇ ಮತ್ತೊಮ್ಮೆ ದೇವರಿಗೆ ಶರಣಾಗುತ್ತಾಳೆ. ಅವನೇ ತನ್ನ ಶೋಕವನ್ನು ನೀಗಲು ಸಮರ್ಥ ಮತ್ತು ಅವನಿಂದಲೇ ಸಾಧ್ಯವೆಂದು ನಂಬುತ್ತಾಳೆ.

ಸಂಕಮ್ಮ ತನ್ನ ದುಃಖವನ್ನು ಅಪಮಾನವನ್ನು ನೀಲಯ್ಯನಿಗೆ ಹೇಳುತ್ತಾಳೆ. ನಾನು ಬದುಕಿದ್ದು ಫಲವೇನು ಎಂದುಕೊಳ್ಳುತ್ತಾಳೆ. ತಂದೆ-ತಾಯಿ, ಬಂಧು-ಬಳಗವನ್ನು ಕರೆಸಿ ನೀನು ಕೊಟ್ಟಿದ್ದ 'ತೆರ'ವನ್ನು ಹಿಂತೆಗೆದುಕೊಂಡು ನನ್ನನ್ನು ಬಿಟ್ಟುಬಿಡು ಎಂದು ಹೇಳುತ್ತಾಳೆ. ಅಂದರೆ ಬುಡಕಟ್ಟು ಸಮುದಾಯಗಳಲ್ಲಿಯೂ ಕೂಡ ಮದುವೆ ಹೇಗೆ ಸಮುದಾಯದ ಒಪ್ಪಿಗೆಯನ್ನು ಪಡೆಯಬೇಕಿತ್ತೋ, ಹಾಗೆಯೇ ವಿಚ್ಛೇದನ ಕೂಡ ಸಮುದಾಯದ ಒಪ್ಪಿಗೆಯನ್ನು ಪಡೆಯಬೇಕಿತ್ತು. ತೆರವನ್ನು ಹಿಂಪಡೆಯಬೇಕಿತ್ತು. ಜನಪದ ಮಹಾಕಾವ್ಯಗಳು ಒಂದು ಸಮುದಾಯ ಬುಡಕಟ್ಟಿನ ಸಾಂಸ್ಕೃತಿಕ, ಧಾರ್ಮಿಕ ಇತಿಹಾಸ ಎನ್ನುವ ಮಾತು ಈ ಸಂದರ್ಭದಲ್ಲಿ ಹೆಚ್ಚು ಉಪಯುಕ್ತವಾಗಿ ಅನ್ವಯಿಸುತ್ತದೆ. ಸಮುದಾಯದ ಜೀವನ ಸಾಮಾಜಿಕವಾಗಿ ಎಲ್ಲ ರೀತಿಯಿಂದಲೂ ವ್ಯವಸ್ಥಿತವಾಗಿರುತ್ತದೆ. ಇಲ್ಲಿ ತೆರ ವ್ಯವಸ್ಥೆ ಇರುವುದರಿಂದ ಇದು ಆ ಸಂದರ್ಭದ ಹೆಣ್ಣಿನ ಮತ್ತು ಗಂಡಿನ ನಡುವೆ ಇರುವ ಅಸಮ ಅನುಪಾತವನ್ನು ಸೂಚಿಸುತ್ತದೆ. ಇಲ್ಲಿ ಹೆಣ್ಣಿನ ಬಗೆಗಿನ ಗೌರವವನ್ನು ಗುರ್ತಿಸಬಹುದು.

ನೀಲಯ್ಯ ತನ್ನ ಹೆಂಡತಿಯ ಅವಮಾನ ಮತ್ತು ದುಃಖದ ತೀವ್ರತೆಯನ್ನು ಅರಿತು ಪ್ರತ್ಯೇಕ ವಾಸಮಾಡುವ ಯೋಚನೆ ಮಾಡುತ್ತಾನೆ. ತನ್ನ ಹೆಂಡತಿಯನ್ನು ಅವಮಾನಿಸಿದರೆ ಅದು ನನ್ನನ್ನು ಅವಮಾನಿಸಿದಂತೆಯೇ ಎಂದು ತಿಳಿಯುತ್ತಾನೆ. ತನ್ನ ತಂದೆ-ತಾಯಿ ಅಣ್ಣಂದಿರನ್ನು ಕರೆದು ತನ್ನ ಕೋಪವನ್ನು ವ್ಯಕ್ತಪಡಿಸುತ್ತಾನೆ.

"ನಾನಿಲ್ಲದಂತೆ ವ್ಯಾಳ್ಯದಲ್ಲಿ
ನನ್ನ ಮಡದಿಯಾದಂತ ಸರಣೆ ಸಂಕಮ್ಮಂಗೆ
ಆಡುಬಾರುದ್ದಾಡಿ
ಮಾಡುಬಾರುದು ಶಿಕ್ಷೆ ಮಾಡಿ
ಕೊಡಬಾರದ ಕೊಲೇ ಕಷ್ಟವನ್ನು ಕೊಟ್ಟು
ಗಾಳುಗೋಳುಪಡ್ಸಿದ್ದೀರಿ

ನನುಗೆ ಬಂದ ಕಷ್ಟ ನನ್ನ ಮಡದೀಗಲ್ವ?
ನನ್ನ ಮಡದೀಗೆ ಬಂದ ಕಷ್ಟ ನನಗಲ್ವ?
ನನ್ನ ಮಡ್ಡಿಯನ್ನು ಜರ್ದು ಹೀನಾಯದ ಮಾತಾಡುದ್ಮೇಲೆ
ನನ್ನವರ್ಯಾಕೆ ತನ್ನವರ್ಯಾಕೆ?
ಈವತ್ನಿಂದ ನನ್ಗೂ ನಿಮ್ಗು ಯಾವ ಸಮಂದವೂ ಬ್ಯಾಡ
ನಿಮ್ಮ ಸಾವಾಸ ನನಗೆ ತರವಲ್ಲ
ನನ್ನ ಸಾವಾಸ ನಿಮುಗೆ ತರುವಲ್ಲ
ಆದರಿಂದ ಕೇಳಿ ನನ್ಗೆ ಕೊಡಬೇಕಾದ ಪಾಲುಪತ್ತು ಏನೈತೊ
ಆದನ್ನೆಲ್ಲ ಕೊಡಬೇಕು"[9]

ತನ್ನ ಮಡದಿಗೆ ತನಗೆ ಗೌರವವಿಲ್ಲದ ಸ್ಥಳದಲ್ಲಿ ಜನರೊಡನೆ ನಾನು ಬಾಳಲು ಇಷ್ಟವಿಲ್ಲ ಎನ್ನುತ್ತಾನೆ. ಮೇಲಿನ ಮಾತುಗಳಿಂದ ತನ್ನ ಹೆಂಡತಿಗೆ ಎಷ್ಟು ಸ್ಪಂದಿಸುತ್ತಾನೆ ಎನ್ನುವುದು ತಿಳಿಯುತ್ತದೆ. ಗಮನಿಸಬೇಕಾದ ಪದವೆಂದರೆ 'ಪಾಲುಪತ್ತು' ಈ ಘಟನೆ ನಡೆದಿದೆ ಎಂದು ಹೇಳಲಾಗುವ ಕಾಲದಲ್ಲಿ ಮತ್ತು ಬುಡಕಟ್ಟು ಸಮುದಾಯದಲ್ಲಿ ಈ ಆಸ್ತಿ ನೊಂದಣಿ ವ್ಯವಸ್ಥೆಗಳೇ ಇರಲಿಲ್ಲ. ಜನಪದ ಮಹಾಕಾವ್ಯಗಳು ಬೆಳೆಯುತ್ತಿರುವ ಮಹಾಕಾವ್ಯಗಳಾಗಿರುವುದರಿಂದ ಇವು ಕಾಲಾಂತರದಲ್ಲಿ ಬಂದು ಸೇರಿಕೊಂಡ ಸಂಗತಿಗಳಾಗಿವೆ ಎನ್ನಲಡ್ಡಿಯಿಲ್ಲ.

ನೀಲಯ್ಯನ ಮಾತುಗಳನ್ನು ಇನ್ನಷ್ಟು ವಿಶ್ಲೇಷಿಸುವ ಅಗತ್ಯವಿದೆ. ತಾನೇ ಮೆಚ್ಚಿ ತಂದ ಮಡದಿಗೆ ಈ ರೀತಿ ಅವಮಾನವಾದಾಗ ಅವನು ಬಹಳ ಪರಿಣಾಮಕಾರಿಯಾಗಿಯೇ ಪ್ರತಿಕ್ರಿಯಿಸಬೇಕಾಗುತ್ತದೆ. ಮಡದಿಯ ಬಗೆಗಿನ ಒಲವು ಅವನಲ್ಲಿ ಗಾಢವಾಗಿಯೇ ಇದೆ. ಏಕೆಂದರೆ ಸಂಕಮ್ಮನನ್ನು ಬೇರೆ ಯಾರೂ ಅಂದರೆ ತಂದೆ ತಾಯಿಗಳಾಗಲೀ ಅಣ್ಣಂದಿರಾಗಲೀ ನೋಡಿ ತಂದಿಲ್ಲ. ಆದ್ದರಿಂದ ಅವಳ ಸಂಪೂರ್ಣ ಜವಬ್ದಾರಿ ಈತನ ಮೇಲೆಯೇ ಇದೆ. ಅವನ ವಾದ ನೈತಿಕವಾದುದಾಗಿದೆ. ತನ್ನನ್ನು ತನ್ನ ಪತ್ನಿಯನ್ನು ಅಭೇದವಾಗಿ ತಿಳಿದುಕೊಂಡಿದ್ದಾನೆ. ಹಾಗಾಗಿಯೇ ಅವನು ಈ ಸಂದರ್ಭದಲ್ಲಿ ಬಹು ಆದರ್ಶ ವ್ಯಕ್ತಿಯಾಗಿ, ಹೆಂಡತಿಗೆ ಸ್ಪಂದಿಸುವ ಗಂಡನಾಗಿ ಕಾಣುತ್ತಾನೆ. ತಂದೆ-ತಾಯಿಗಳು, ಅಣ್ಣಂದಿರು ಅವನಿಗೆ ಹೆಂಗಸರ ಮಾತನ್ನು ದೊಡ್ಡದು ಮಾಡುವುದು ಒಳ್ಳೆಯದಲ್ಲ. ಈ ಬುದ್ಧಿ ನಿನಗೆ ತರವಲ್ಲ ಎಂದು ಹೇಳುತ್ತಾರೆ. ಆದರೆ ನೀಲಯ್ಯ ನಿಶ್ಚಿತವಾಗಿ ಖಡಾಖಂಡಿತವಾಗಿ 'ಇದು ಮಾತ್ರ ಖಂಡಿತ ಸಾಧ್ಯವಿಲ್ಲ' ಎಂದು ಸಂಧಾನಕ್ಕೆ ಒಪ್ಪಿಕೊಳ್ಳುವುದಿಲ್ಲ. ಅವರ ಜೊತೆ ಬಾಳುವುದಕ್ಕೆ ಇಷ್ಟಪಡದೆ ತನ್ನ ಪಾಲನ್ನು ತೆಗೆದುಕೊಳ್ಳುತ್ತಾನೆ. ಅಣ್ಣಂದಿರೊಂದಿಗೆ ತನ್ನ ಸಂಬಂಧವನ್ನು ಅಂತಿಮವಾಗಿ ಕಡಿದುಕೊಂಡ ನೀಲಯ್ಯ ಕಾಣಬಾರದ ಕಾಡಲ್ಲಿ, ಆಲ, ತೇಗ, ಹೊನ್ನೆ, ಕಕ್ಕೆ ಮೊದಲಾದ ಮರಗಳನ್ನು ಬಳಸಿ ಒಂಟಿ ದೊಡ್ಡಿಯನ್ನು ಕಟ್ಟಿದ್ದಾನೆ. ಸೊಪ್ಪಿನ ಗುಡಿಸಲಿನಲ್ಲಿ ಸತ್ಯವಂತೆ ಸಂಕಮ್ಮನೊಂದಿಗೆ ವಾಸವಾಗಿರುತ್ತಾನೆ. ತನ್ನ ನಿತ್ಯದ ಕೆಲಸವನ್ನು ಮುಂದುವರೆಸುತ್ತಾನೆ. ಸಂಕಮ್ಮನಿಗೆ ಭದ್ರತೆಯನ್ನು ನೆಮ್ಮದಿಯನ್ನು ಕೊಡುತ್ತಾನೆ.

ಬುಡಕಟ್ಟು ಸಮುದಾಯದಲ್ಲಿ ಬೇಟೆ, ಜೇನು ಸಂಗ್ರಹಣೆ, ಇವು ಅವರ ಜೀವನದ ಅವಿಭಾಜ್ಯ ಅಂಗಗಳು. ಮಾನವ ವಿಕಾಸ ಈ ಹಾದಿಯಲ್ಲಿಯೇ ಸಾಗಿಬಂದಿರುವಂತಹದ್ದು. ಸೋಲಿಗರಲ್ಲಿ ಕೂಡ ಇವುಗಳು ಪ್ರಧಾನವಾಗಿರುವಂತಹವು. ಈಗಿನ ಊರಿನ ಕೆಲವು ಸಮುದಾಯದವರು ವರ್ಷಕ್ಕೊಂದು ಸಲ ಬೇಟೆಗೆ ಹೋಗುವುದನ್ನು ಕಾಣುತ್ತೇವೆ. ಬಹುತೇಕವಾಗಿ ಅದು ಜಾತ್ರೆಯ ಸಂದರ್ಭದಲ್ಲಿ ಇರುತ್ತದೆ. ಕಾಡುಗಳು ಬಹುತೇಕ ವಿರಳವಾಗಿರುವ ಈ ಕಾಲದಲ್ಲಿಯೂ ಬೇಟೆಯ ಆಚರಣೆ ಮುಂದುವರೆದಿದೆ. ಜಾತ್ರೆಯ ಸಂದರ್ಭದಲ್ಲಿ ಹೋಗುವ ಈ ಬೇಟೆಯು ಯಾವುದೋ ಒಂದು ವಿಶೇಷ ಮತ್ತು ನಿರ್ದಿಷ್ಟ ಪ್ರಾಣಿಯನ್ನು ಹಿಡಿಯುವ / ತರುವ ಉದ್ದೇಶ ಹೊಂದಿರುತ್ತದೆ. ಕೆಲವು ಸಲ ಜಾತ್ರೆಯ ದೇವರಿಗೆ ಇಂತಹದ್ದೇ ಪ್ರಾಣಿಯನ್ನು ಬೇಟೆಯಾಡಿ ತರಬೇಕೆಂಬ ನಿಯಮಗಳೂ ಇವೆ. ಹೀಗೆ ಸೋಲಿಗರೂ ಕೂಡ ಬೇಟೆಗೆ ಹೋಗುತ್ತಿದ್ದರು.

"ನಮ್ಮ ಜಾತ್ರೆ ಬಂದ್ಬುಡ್ತಲ್ರಪ್ಪ
ನಮ್ ಜಾತ್ರೆಗೆ ಬಿದರಕ್ಕಿ ಆಗ್ಬೇಕು ಬೆಲ್ಗೆಣ್ಣಾಗ್ಬೇಕು
ಕಜ್ಜೂರದಣ್ಣು ಕಟ್ಬೇನೀರು ಮದರಂಗನ ಬಾಳಣ್ಣಾಗಬೇಕು
ಹೆಜ್ಜೇನು ತುಪ್ಪ ಕಿರುಜೇನುತುಪ್ಪ ಇಷ್ಟೆಲ್ಲ ಆಗ್ಬೇಕು"[10]

ಸೋಲಿಗರು ಆಚರಿಸುವ ಆಚರಣೆಗಳಿಗೆ ವಿಶೇಷ ವಸ್ತುಗಳು ಬೇಕು. ಆದಕ್ಕಾಗಿ ಜೇನು ಬೇಟೆ ಬಿದರಕ್ಕಿ ಸಂಗ್ರಹಣೆಗೆ ಪ್ರತಿಯೊಬ್ಬನೂ ಬೆಟ್ಟ, ಕಾಡನ್ನು ಅಲೆಯಬೇಕಾಗುತ್ತದೆ. ಇಲ್ಲಿ ಮುಖ್ಯವಾದ ಅಂಶವೆಂದರೆ ಕೇವಲ ಆಚರಣೆಗಾಗಿ ಮಾತ್ರವಾಗಿರದೆ ಅದು ಸೋಲಿಗರ ಜೀವನಕ್ಕೆ ಆಧಾರವಾಗಿದೆ. ಮುಂದೆ ಸಂಕಮ್ಮ ತಿಳಿಸುವಂತೆ ಮಾದೇಶ್ವರನಿಗೆ ಭಿಕ್ಷೆ ನೀಡುವ ಸಂದರ್ಭದಲ್ಲಿ ತನ್ನ ಪಾಲಿಗೆ ಬರುವ ಹೆಜ್ಜೇನು ತುಪ್ಪ ಕಿರುಜೇನು ತುಪ್ಪ ಇವುಗಳನ್ನು ನಿನಗೆ ಕೊಡುತ್ತೇನೆ ಎಂದು ಹೇಳುತ್ತಾಳೆ. ಅಂದರೆ ಅವರ ಆಹಾರ ಪದ್ಧತಿಯನ್ನು ಕೂಡ ನಾವಿಲ್ಲಿ ತಿಳಿಯಬಹುದು. ಹೆಜ್ಜೇನು, ಕಿರುಜೇನು, ಬಿದರಕ್ಕಿ ಇವುಗಳ ಆಹಾರ ಕ್ರಮದಲ್ಲಿ ಪ್ರಧಾನ ಸ್ಥಾನವನ್ನು ಹೊಂದಿದ್ದವು. ನಾವು ಸ್ತ್ರೀವಾದಿ ನೆಲಯಲ್ಲಿ ನೋಡುವುದಕ್ಕೆ ಹೊರಟಾಗಲೂ ಸಮುದಾಯದ ಜೀವನ ಕ್ರಮವನ್ನು ಸಾಂಸ್ಕೃತಿಕ ಅಂಶಗಳನ್ನು ಅಲಕ್ಷಿಸುವಂತಿಲ್ಲ. ಮಹಾಕಾವ್ಯಗಳ ಅಧ್ಯಯನಕ್ಕೆ ತೊಡಗಿದಾಗ ಈ ಅಂಶಗಳು ನಮಗೆ ಅರಿವಿಲ್ಲದಂತೆ ತಮ್ಮತ್ತ ಗಮನ ಸೆಳೆದುಕೊಳ್ಳುತ್ತದೆ.

ನೀಲಯ್ಯನು ಒಂಟಿದೊಡ್ಡಿಯಲ್ಲಿರುವಾಗ ಅವನಿಗೂ ಕೂಡ ಬೇಟೆಗೆ ಹೋಗಲು ಕರೆ ಬರುತ್ತದೆ. ಬೇಟೆಗೆ ಹೊರಡಲು ಸಭೆ ಸೇರಿದಾಗ ಇವನ ವಿಷಯವೂ ಬರುತ್ತದೆ. ಆದರೆ ನೀಲಯ್ಯನಿಗೆ ವಿನಾಯಿತಿ ಕೊಡುವಂತಿಲ್ಲ. ಏಕೆಂದರೆ ಅದು ತಲೆತಲಾಂತರಗಳಿಂದ ನಡೆದು ಬಂದ ಪದ್ಧತಿಯಾಗಿದೆ. ಒಂದು ವೇಳೆ ಅವನು ಬೇಟೆಗೆ ಹೋಗದಿದ್ದರೆ ನಿರ್ಬಂಧಕ್ಕೆ ಗುರಿಯಾಗಬೇಕಾಗುತ್ತದೆ.

"ಯಾರಾದರೂ ಒಂದು ಮನೆಯಲ್ಲಿ ಒಬ್ಬ ಮನ್ಸ ಬರ್ದೇಹೋದ್ರೆ
ಅವನನ್ನು ಹಂತೀಪಂತಿಗೆ ಸೇರಿಸ್ಬಾರ್ದು
ಕುಲಾಕೂಟಕ್ಕೆ ಸೇರಿಸ್ಬಾರ್ದು
ನಮ್ಮ ದೊಡ್ಡೀವೊಳಗೆ ಬೆಂಕಿ ಬಿಸ್ನೀರು ಕೊಡಬಾರದು

ಅವನ ಕೂಡ ಮಾತ್ನಾಡಬಾರ್ದು

ಬಹಿಷ್ಕಾರ ಹಾಕಿ ಬಿಟ್ಬಿಡಬೇಕು"[10]

ಹೀಗೆನ್ನುವಾಗ ಒಂಟಿ ಬದುಕನ್ನು ಮನುಷ್ಯ ಬದುಕಲಾರ. ಮೂಲತಃ ಬುಡಕಟ್ಟು ಜನಾಂಗವಾದ್ದರಿಂದ ಬೆಂಕಿ ಇತ್ಯಾದಿಗಳ ಕೊಡುಕೊಳೆ ಅನಿವಾರ್ಯವಾದ ಸಂಗತಿಗಳಾಗಿವೆ. ಮೂಲಭೂತವಾದ ವಸ್ತುಗಳಿಲ್ಲದ ಅವನು ಬಾಳಲಾರ. ಹೀಗಾಗಿ ಬಹಿಷ್ಕಾರ ಪರಿಣಾಮಕಾರಿಯಾದ ಶಿಕ್ಷೆಯಾಗುತ್ತದೆ. ಯಾವುದೇ ಸಭೆಗ ಆಟಕ್ಕೆ ಸೇರಿಸಬಾರದು. ಮಾತನ್ನಾಡಬಾರದು ಎನ್ನುವಲ್ಲಿಯೇ ಸಂಪೂರ್ಣ ಸಂಬಂಧವನ್ನು ಕಡಿದುಕೊಳ್ಳುವ ಮನಸ್ಸಿದೆ. ಬಹಿಷ್ಕಾರ ಹಾಕಿಬಿಡಬೇಕು ಎಂದಾಗ ನಮ್ಮನ್ನುಳಿದು ಪ್ರತ್ಯೇಕವಾಗಿ ಬದುಕಲು ಸಾಧ್ಯವಿಲ್ಲ ಎಂದು ತಿಳಿದಿದ್ದಾರೆ. ಮನುಷ್ಯ ಸಮಾಜಜೀವಿ ಎಂದು ಭಾವಿಸಿರುವುದರಿಂದ ಸಮಾಜವಿಲ್ಲದೆ ಜೀವಿಸಲಾರ. ಅಗತ್ಯ ವಸ್ತುಗಳ ಪೂರೈಕೆಗೆ ಒಡನಾಟಕ್ಕೆ ಒಡನಾಡಿಗಳು ಬೇಕೆಬೇಕು. ಹೀಗಾಗಿ ನೀಲಯ್ಯನು 'ವನಾ ಮೀರುದ ಪಕ್ಷಿ ಕುಲಾ ಮೀರಿದ ಮನುಸ ಎರಡೂ ಒಂದಲ್ವ' ಎಂದು ತಿಳಿದು ಕುಲಸ್ತರಿಗೆ ಬೇಟೆಗೆ ಬರುವುದಾಗಿ ಹೇಳುತ್ತಾನೆ.

ಕುಲದವರನ್ನು ಬೇಟೆಗೆ ಕಳುಹಿಸಿ ತಾನು ಹೆಂಡತಿಗೆ ತಿಳಿಸಿ ಬರುವುದಾಗಿ ನೀಲಯ್ಯ ತನ್ನ ಒಂಟಿ ಗುಡಿಸಲಿಗೆ ಬರುತ್ತಾನೆ. ಸಂಕಮ್ಮನಿಗೂ ಕೂಡ ಕುಲದವರು ಜೇನು, ಕಾಡುಬಾಳೆ, ಗುಳುಸಂಡೆ ಹಣ್ಣು, ಬ್ಯಾಲದ ಕಾಯಿ, ಬೆಲ್ಲದ ಗೆಣ್ಸು, ಬಿದುರಕ್ಕಿ ಇವುಗಳನ್ನು ತರಲು ಹೋಗುತ್ತಾರೆ. ನಾನೂ ಹೋಗಬೇಕಾಗಿದೆ. ಹೋಗುವುದು ಮೂರು ತಿಂಗಳು, ಬರುವುದು ಮೂರು ತಿಂಗಳು, ಅಲ್ಲಿರುವುದು ಮೂರು ತಿಂಗಳು, ಒಟ್ಟು ಒಂಬತ್ತು ತಿಂಗಳು. ಒಂಬತ್ತು ತಿಂಗಳು ತುಂಬಿದ ಮೇಲೆ ಸೋಮವಾರ ತಪ್ಪದೆ ಬರುತ್ತೇನೆ ಎನ್ನುತ್ತಾನೆ. ಸಂಕಮ್ಮನೂ ಕೂಡ ಕುಲದವರೊಡನೆ ಬೇಟೆಗೆ ಹೋಗುವುದು ಉಚಿತವೆಂದು ಹೇಳುತ್ತಾಳೆ.

ಚೆಲುವೆಯಾದ ಸಂಕಮ್ಮನನ್ನು ಕಾಡಿನ ಮಧ್ಯದಲ್ಲಿ ಬಿಟ್ಟು ಹೋಗಲು ನೀಲಯ್ಯನಿಗೂ ಭಯ ಮತ್ತು ಅನುಮಾನ, ಹೀಗಾಗಿ ಅವನು ಅವಳಿಂದ ಭಾಷೆಯನ್ನು ಕೇಳುತ್ತಾನೆ.

"ಕಾಲ ತಪ್ದೆ ಒಂಬತ್ತು ತಿಂಗ್ಳುವರುಗೂ
ಹ್ಯಾಗೆ ನಚ್ಚಲಿ ಹ್ಯಾಗೆ ನಂಬ್ಲಿ ನಿನ್ನನ್ನು ನಾನು
ನನ್ಗೆ ಬಲಗೈ ಭಾಷೆ ಕೊಟ್ಟು
ಹೆಜ್ಜೇನ ಮಲೆಗೆ ಕಳುಗೆಣ್ಣೆ"[12]

ಗಂಡು ಚೆಲುವೆಯಾದ ಹೆಣ್ಣನ್ನು ಯಾವತ್ತೂ ಅನುಮಾನಿಸುತ್ತಾನೆ. ಇದಕ್ಕೆ ನೀಲಯ್ಯ ಕೂಡ ಹೊರತಲ್ಲ. ಒಂಬತ್ತು ತಿಂಗಳು ಹೆಂಡತಿಯ ಹತ್ತಿರವಿರಲಾರದ ಸ್ಥಿತಿಯಲ್ಲಿ ಅವನು ಭಾಷೆಯನ್ನು ಅಪೇಕ್ಷಿಸುತ್ತಾನೆ. ಮತ್ತು ಹೀಗೆ ಭಾಷೆಯನ್ನು ಕೊಟ್ಟು ನನ್ನನ್ನು ಬೇಟೆಗೆ ಕಳುಹಿಸೆಂದು ಕೇಳುತ್ತಾನೆ.

ಸಂಕಮ್ಮನ ಸ್ವಾಭಿಮಾನ ನಿಜವಾಗಿ ಜಾಗೃತವಾಗುವುದು ಇಲ್ಲಿಂದಲೇ. ಅದರಲ್ಲೂ ಶೀಲದ ಬಗ್ಗೆ

ಅನುಮಾನಿಸುವ ಗಂಡನನ್ನು ಪ್ರಶ್ನಿಸುತ್ತಾಳೆ. ತಪ್ಪು ಮಾಡದೆ ಭಾಷೆಯನ್ನು ಕೊಡುವ ಇಂಗಿತವೇನೆಂದು ಕೇಳುತ್ತಾಳೆ.

"ಅಯ್ಯಾ ಯಜಮಾನ ಯಜಮಾನ
ಎಂದೂ ಆಡದ ಮಾತ ಈ ದಿವ್ಸ ಆಡ್ತಿದ್ದೀರಲ್ಲ
ಬಲಗೈ ಮುಟ್ಟಿ ಭಾಷೆ ಕೊಡು ಅಂತ ಕೇಳ್ತಿದ್ದೀರಲ್ಲ
ಬಲಗೈ ಮುಟ್ಟಿ ಭಾಷೆ ಕೊಡೊದ್ಕೆ ಅಂತೆ ತೆಪ್ಪೊನೆಪ್ಪ
ನಾನು ಏನು ಮಾಡಿದ್ದೆನು
ತೆಪ್‌ಕಾಣ್ಣೆಲ್ಲ ಅನ್ಯಾಯ ಕಾಣ್ಣೆಲ್ಲ
ಕಳ್ತನ ಮಾಡ್ಲಿಲ್ಲ ಸುಳ್‌ಸಾಕ್ಷಿ ಹೇಳ್ಲಿಲ್ಲ
ಮನೇಲಿದ್ದೋಳ ಮಂದುಕ್ಕೆ ತೂದಂಗೆ
ಗರ್ತೀಯ ಹಾದುರುಗಿತ್ತಿ ಮಾಡ್ದಂಗೆ"[13]

ಗೌರವಾನ್ವಿತವಾಗಿಯೇ ಆದರೆ ಹರಿತವಾಗಿ ನ್ಯಾಯಬದ್ಧವಾಗಿ ತನ್ನ ವಾದವನ್ನು ಮುಂದಿಡುತ್ತಾಳೆ. ತನ್ನ ತಪ್ಪನ್ನು ತೋರಿಸಿ ಎನ್ನುತ್ತಾಳೆ. ಮುಖ್ಯವಾದ ಮಾತೆಂದರೆ 'ಗರ್ತೀಯ ಹಾದುರಗಿತ್ತಿ ಮಾಡಿದಂತೆ' ಎನ್ನುತ್ತಾಳೆ ಹೆಣ್ಣು ಏನನ್ನು ಬೇಕಾದರೂ ಸಹಿಸುತ್ತಾಳೆ. ಆದರೆ ತನ್ನ ಮೇಲೆ ಶೀಲದ ಬಗೆಗಿನ ಅನುಮಾನವನ್ನು ಸಹಿಸುವುದಿಲ್ಲ. ಹೀಗಾಗಿ ಅವಳು ತಪ್ಪು ಮಾಡದವರಿಗೆ ಭಯ ಸಂಕೋಚ ಕೂಡದೆಂದು ತನ್ನ ಶೀಲದ ಬಗ್ಗೆ ಅನುಮಾನಿಸುವುದನ್ನು ಒಂದು ಸವಾಲಾಗಿಯೂ ಪ್ರತಿಷ್ಠೆಯ ಗರತಿಯ ಪ್ರಶ್ನೆಯಾಗಿಯೂ ತೆಗೆದುಕೊಳ್ಳುತ್ತಾಳೆ. ಇಷ್ಟು ದಿನಗಳವರೆಗೆ ಪತಿಗೆ ನಿಷ್ಠಳಾಗಿ ಬದುಕಿದರೂ ಈ ದಿನ ಅನುಮಾನಿಸುತ್ತಿದ್ದಾರಲ್ಲ ಎಂದು ಅವಳ ಪ್ರಶ್ನೆ. ಇಲ್ಲಿಂದಲೇ ನಿಜವಾದ ಸ್ತ್ರೀವಾದಿ ಧೋರಣೆಗಳು ಸಂಕಮ್ಮನಿಂದ ಬರುತ್ತವೆ. ಯಾವುದೇ ಆಧುನಿಕ ಸ್ತ್ರೀವಾದಿಗಳಿಗಿಂತ, ಚಳುವಳಿಗಾರ್ತಿಯರಿಗಿಂತ ಕಡಿಮೆ ಇಲ್ಲದಂತೆ ಗಂಡನನ್ನು ಪ್ರಶ್ನಿಸುತ್ತಾಳೆ. ಏಕೆಂದರೆ ಅವಳು ಗಂಡನಿಗೆ ನಿಷ್ಠುರಳಾಗಿದ್ದಾಳೆ. ಕ್ರಮಬದ್ಧವಾಗಿಯೇ ತನ್ನ ವಾದವನ್ನು ಮಂಡಿಸುತ್ತಾಳೆ. ತನ್ನಲ್ಲಿ ಏನಾದರೂ ತಪ್ಪು ಕಂಡ ಪಕ್ಷದಲ್ಲಿ ತೆರವನ್ನು ಹಿಂತೆಗೆದುಕೊಂಡು ಮಡದಿಯನ್ನು ಬಿಡಬೇಕೆಂದು ಹೇಳುತ್ತಾಳೆ ಅವಳ ಮಾತಿನಲ್ಲೇ ಹೇಳುವುದಾದರೆ

"ಅಂಥಾ ತೊಪ್ಪೋ ನೆಪ್ಪ ನೀನು ಕಂಡಿರೋದೆ ಆದ ಪಕ್ಷದಲ್ಲಿ
ತಂದೆ-ತಾಯ ಕರುಸಯ್ಯ
ಅತ್ತೆ-ಮಾವರ ಕರುಸಯ್ಯ
ಅಣ್ಣ-ತಮ್ದೀರ ಕರುಸಯ್ಯ
ಬಂಧೂ ಬಳ್ಗ ಕರುಸುಯ್ಯ
ಕುಲದೋರ್ನೆಲ್ಲ ಕರುಸಯ್ಯ
ಮತುದೋರ್ನೆಲ್ಲ ಕರುಸಯ್ಯ
ನ್ಯಾಯನಾದ್ರೆ ಮಾಡ್ಸಯ್ಯ

ತೆಪ್ಪು ನೆಪ್ಪ ತೋರ್ಸಯ್ಯ
ನೀನು ಕಟ್ಟಿದ್ದ ತೆರವ ತಕ್ಕಂಡಲ್ಲೆ
ಬುಟ್ಟು ಬುಡಯ್ಯ ಮಡದೀಯ"[14]

ಸಂಕಮ್ಮ ಭಾಷೆ ಕೊಡುವುದಿಲ್ಲ. ಅಂತಹ ತಪ್ಪು ಮಾಡಿದ್ದರೆ ಮದುವೆಯಾಗುವಾಗ ಹೇಗೆ ಕುಲದವರನ್ನು ಸೇರಿಸಿದ್ದೆಯೋ ಹಾಗೆ ಈಗಲೂ ಕೂಡ ಕುಲದವರನ್ನು ಸೇರಿಸಿ ತನ್ನಿಂದ ಆದ ಅಪರಾಧದ ಬಗ್ಗೆ ಮಾತನಾಡು ಎನ್ನುತ್ತಾಳೆ. ಕಾವ್ಯವೇ ವಿವರಿಸುವಂತೆ ಸಂಕಮ್ಮ ಸತ್ಯವಂತೆಯಾಗಿ, ಶರಣೆಯಾಗಿ, ಪತಿವ್ರತೆಯಾಗಿರುತ್ತಾಳೆ. ಇಷ್ಟೆಲ್ಲ ಗಂಡನಿಗೆ ನಿಷ್ಠಳಾಗಿದ್ದರೂ ಈ ರೀತಿ ಅನುಮಾನಿಸುವ ಗಂಡನ ಬಗ್ಗೆ ಸಹಜವಾಗಿಯೇ ಅಸಹನೆ ಉಂಟಾಗುತ್ತದೆ. ನೀಲಯ್ಯ ಸಂಕಮ್ಮನ ಮಾತಿಗೆ ಆಶ್ಚರ್ಯ ಮತ್ತು ಕೋಪಬೆರೆತ ದನಿಯಲ್ಲಿ ಹೇಳುತ್ತಾನೆ. 'ಎಲಾ ಮಡದಿ ತೆರವನ್ನು ಹಿಂಪಡೆದು ನಿನ್ನನ್ನು ಬಿಟ್ಟುಬಿಡಲು ನೀನೇನು ದನುವ ಕರುವ ಕುರಿಯ ಕೋಳಿಯ ಆಡ ಎಮ್ಮೆಯ' ಎಂದು ಕೇಳುತ್ತಾನೆ. ಸಹಜವಾಗಿಯೇ ಆತನಿಗೂ ಹೆಂಡತಿಯ ಮೇಲೆ ಒಲವಿದೆ. ಅವಳ ಕಷ್ಟಗಳಿಗೆ ಸ್ಪಂದಿಸುತ್ತಾನೆ. ಪ್ರಾಣಿಗಳಂತೆ ನಿನ್ನನ್ನು ವ್ಯವಹಾರಕ್ಕಾಗಿ ತಂದಿಲ್ಲ. ತನ್ನ ಬಾಳ ಸಂಗಾತಿಯಾಗಿ ತಂದುಕೊಂಡಿರುವುದಾಗಿ ಹೇಳುತ್ತಾನೆ. ಸಂಕಮ್ಮನಿಗೆ ಅವಳ ಚೆಲುವೇ ಈ ಸಂದರ್ಭದಲ್ಲಿ ಶಾಪವಾಗಿ ಪರಿಣಮಿಸಿದೆ. ಸಂಕಮ್ಮನ ಚೆಲುವಿಗೆ ಮರುಳಾಗಿ ಆಸೆಪಟ್ಟು ಯಾವನು ಅವಳನ್ನು ಕರೆದುಕೊಂಡು ಹೋಗುತ್ತಾನೋ ಅನ್ನುವ ಭಯ. ಸಂಕಮ್ಮ ಗಂಡನಿಗೆ 'ಅಡ್ಗೆಯನ್ನು ಮಾಡಿ ಪ್ರೀತಿಯಿಂದ ಊಟಕ್ಕೆರೆಯುತ್ತೇನೆ ವೀಳ್ಯವನ್ನು ಕೊಟ್ಟು ನಗುನಗುತ್ತಾ ಕಳಿಸಿಕೊಡುತ್ತೇನೆ' ಬೇಟೆಗೆ ಹೋಗಿಬನ್ನಿ ಎನ್ನುತ್ತಾಳೆ. ಒಂಬತ್ತು ತಿಂಗಳು ಗಂಡನಿಂದ ದೂರವಿರುವುದು ಅವಳಿಗೂ ಕಷ್ಟವೇ, ಆದರೂ ಕುಲದ ಸಂಬಂಧಕ್ಕಾಗಿ ಅವಳು ಒಂಟಿಯಾಗಿ ಕಾಲಕಳೆಯಲು ನಿರ್ಧರಿಸುತ್ತಾಳೆ. ಇಲ್ಲಿಯವರೆಗೂ ನೀಲಯ್ಯನ ಜೊತೆ ಸಂಸಾರ ಮಾಡಿದ ಸಂಕಮ್ಮನಿಗೆ ತನ್ನ ನಿಷ್ಠೆಯನ್ನು ಗಂಡ ಅನುಮಾನಿಸುತ್ತಾನಲ್ಲ ಎಂಬ ಕೊರಗು. ಆದರೆ ನೀಲಯ್ಯ ನನ್ನನ್ನು ಹೋಗು ಹೋಗು ಅಂತ ನೂಕುತ್ತೀಯಲ್ಲ ನಿನ್ನ ಮರ್ಮವನ್ನು ತಿಳಿಯಲಾಗುವುದಿಲ್ಲ ಎನ್ನುತ್ತಾನೆ. ಆದರೆ ಸಂಕಮ್ಮ ತನ್ನ ಬಂಜೆ ಕೈಯಿನ ಭಾಷೆ ಬೇಡ ಎನ್ನುತ್ತಾಳೆ. ನೀಲಯ್ಯ ಅವಳ ಮಾತನ್ನು ಒಪ್ಪದೆ ನೀನು ಒಂಟಿಯಾಗಿರುವಾಗ ಅಣ್ಣ-ತಮ್ಮಂದಿರು ಯಾರಾದರೂ ಬರುತ್ತಾರೆ, ನನಗೂ ಅವರಿಗೂ ಮೊದಲೆ ಸಂಬಂಧ ಸರಿಯಿಲ್ಲ. ಹೀಗಾಗಿ ಅವರು ನಿನ್ನನ್ನು ಕರೆದುಕೊಂಡು ಹೋಗುವುದಿಲ್ಲ ಎಂದು ಹೇಗೆ ನಂಬಲಿ? ಹಾಗಾಗಿ ನೀನು ಭಾಷೆಯನ್ನು ಕೊಡು ಎನ್ನುತ್ತಾನೆ. ಮುತ್ತಿನ ಸಟ್ಟಿ ಬರುತ್ತಾನೆ. ಹೆಣ್ಣು ಜಲ್ಮಕ್ಕೆ ಮುತ್ತು ಅಂದರೆ ಬಹಳ ಆಸೆ. ಹಾಗಾಗಿ ನೀನು ಮುತ್ತು ಕೊಳ್ಳುವ ಸಂದರ್ಭದಲ್ಲಿ ಅವನು ನಿನ್ನನ್ನು ಒಲುಮೆ ಮದ್ದನ್ನು ಕೊಟ್ಟು ಒಲಿಸಿಕೊಂಡು ಹೋಗುತ್ತಾನೆ. ಹೇಳು ಮಡದಿ ನೀನು ಅವನೊಂದಿಗೆ ಹೋಗುತ್ತಿಯೆ ನನ್ನ ಕುತ್ತಿಗೆಗೆ ನೇಣು ಹಾಕಿಯೊ ಎಂದು ಹೇಳುತ್ತಾನೆ. ಅವಳು ಇಲ್ಲದೆ ನೀಲಯ್ಯ ಬದುಕಲಾರ ಅಷ್ಟು ಗಾಢವಾದ ಪ್ರೀತಿ ಅವಳ ಮೇಲಿದೆ. ಆದರೆ ಅವಳ ಚೆಲುವು ಏನು ಬೇಕಾದರೂ ಮಾಡಬಹುದೆಂಬ ಅನುಮಾನ.

ಒಂಟಿ ದೊಡ್ಡಿಯಲ್ಲಿ ಒಂಟು ಹೆಣ್ಣಿರುವಾಗ ಬಳೆಗಾರ ಬರಬಹುದು, ಆಗ ಅವನ ಜೊತೆಯಲ್ಲಿ ಹೋಗಬಹುದೆಂಬ ಅನುಮಾನ ಏಕೆಂದರೆ ಅವನ ವಾದ ಸರಣಿ ಅತ್ಯಂತ ವೈಜ್ಞಾನಿಕವಾದದ್ದು.

"ಒಬ್ಬ ಬಳಗಾರ ಸೆಟ್ಟಿ ಬತ್ತವುನೆ
ಸೊಪ್ಪಿನ ಗುಳ್ಳ ನೋಡ್ತಾನೆ
ಬಳೆ ಬಳೆ ಅಂತಾ ಸಾರ್ತಾನೆ
ಬಾಗಲ ತಟ್ಟಿ ಕರಿತಾನೆ
.....................
ಚಾಪೆ ನಾದ್ರೆ ಹಾಸ್ತಿಯೆ
ಬಲಗೈನಾದ್ರೆ ಕೊಡ್ತೀಯೆ
ಎಡಗೈನಾದ್ರೆ ಕೊಡ್ತೀಯೆ
ಚಂದಾದ ಬಳೆಯ ತೊಡ್ತಾನೆ
ನಿನ್ನ - ದುಂಡು ತೋಳ ಹಿಡಿತಾನೆ
ನೀನು - ಕಂಡಂಗೆ ಕಾಣ್ದಂಗೆ ಹಿಸುಕ್ತಾನೆ
ನೀನು ದುಡ್ಡಿದ್ದಾರೆ ಕೊಡ್ತೀಯೆ
ಇಲ್ಲಾದೆ ಇದ್ದರೆ ನೋಡ್ತೀಯೆ
.......................
ನಿನಗೆ ಒಲುಮೆ ಮದ್ದ ಕೊಟ್ಟು ನಿನ್ನ
ವಾಲೀಸಿಕೊಂಡು ಹೋಯ್ತಾನೆ"[15]

ನೀಲಯ್ಯನು ತನ್ನ ಹೆಂಡತಿ ಮುಂದೆ ಎದುರಿಸುವ ಸನ್ನಿವೇಶ ಇದರಿಂದ ತನ್ನ ಅನಾಥತೆ ಇವುಗಳನ್ನು ಹೇಳುತ್ತಾನೆ. ಮೇಲಿನ ಮಾತುಗಳು ಅತ್ಯಂತ ಪರಿಶೀಲನಾರ್ಹ. ನೀಲಯ್ಯನಿಗೆ ವಾಸ್ತವಿಕತೆಯ ಅರಿವು ಇದೆ. ಅಂದರೆ ಅದು ಹೆಂಡತಿಯ ಮೇಲಿನ ಅನುಮಾನಕ್ಕಿಂತ ಹೆಚ್ಚಾಗಿ ಹೆಣ್ಣಿಗಿರುವ ಸಹಜ ಆಸೆಗಳು. ಅದನ್ನು ಗಂಡು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದನ್ನು ಅವನು ಗ್ರಹಿಸುತ್ತಾನೆ. ಅವನ ಅನುಮಾನವನ್ನು ಅಲ್ಲಗಳೆಯುವಂತಿಲ್ಲ. ಮೊದಲೆ ರೂಪವತಿಯಾದ ಸಂಕಮ್ಮ ಜೊತೆಗೆ ಒಂಟಿ ಹೆಂಗಸು ಯಾವ ಭದ್ರತೆಯೂ ಇಲ್ಲದ ಕಾಡು. ಈ ಸನ್ನಿವೇಶದಲ್ಲಿ ಅವಳನ್ನು ಬಿಟ್ಟು ಹೋಗಲು ನೀಲಯ್ಯ ಹಿಂಜರಿಯುತ್ತಾನೆ. ಆಕಸ್ಮಿಕವಾಗಿಯೋ ಅಪೇಕ್ಷಿತವಾಗಿಯೋ ಬಲವಂತವಾಗಿಯೋ ಘಟಿಸಬಹುದಾದ ಸಂಗತಿಯನ್ನು ಊಹಿಸಿ ಭಯಪಡುತ್ತಾನೆ.

ಕಾಡಿನಲ್ಲಿ ಒಬ್ಬ ಆಟನಕಾರ, ಮಾಟನಕಾರ, ಬುಡುಬುಡುಕೆಯವನು ಯಾವನಾದರೂ ಬಂದು ನಿನ್ನ ಮಂತ್ರ ತಂತ್ರಗಳ ಸಹಾಯದಿಂದ ಕರೆದುಕೊಂಡು ಹೋಗುತ್ತಾನೆ ಎನ್ನುತ್ತಾನೆ. ನೀನು ಅವನ ಪಾಲಾಗುತ್ತೀಯ, ನನ್ನನ್ನು ಯಮನ ಪಾಲು ಮಾಡುತ್ತೀಯ ಎನ್ನುತ್ತಾನೆ. ಸಂಕಮ್ಮನಿಲ್ಲದಿದ್ದರೆ ಅವನು ಸಾವನ್ನೆ ಇಷ್ಟಪಡುತ್ತಾನೆ. ಅವಳಿಲ್ಲದ ಬದುಕು ಅವನಿಗೆ ನರಕವಿದ್ದಂತೆ ಬಂಜೆಕೈಯಿನ ಭಾಷೆ ಕೊಡುವುದಿಲ್ಲ ಎಂದು ಸಂಕಮ್ಮ ಹೇಳುತ್ತಾಳೆ. ಬೇಕಾದರೆ ನನ್ನನ್ನು ಜೊತೆಯಲ್ಲಿ ಬೇಟೆಗೆ ಕರೆದುಕೊಂಡು ಹೋಗಿ ಎನ್ನುತ್ತಾಳೆ. ಅವನಿಗೆ ಕರೆದುಕೊಂಡು ಹೋಗಲಾರದ, ಇಲ್ಲಿ ಬಿಡಲಾರದ ಧರ್ಮಸಂಕಟ. 'ಹೆಣ್ಣೆಂಬ ಹೆಣ್ ಜಾತಿಯನ್ನು

ನಂಬಕಾಗದಿಲ್ಲ, ಮರ್ಮ ತಿಳಿಯಕಾಗದಿಲ್ಲ ನಾರೀರು ಮಾಡುವಂತ ಕಳುವು ಕಳ್ತನವನ್ನು ದೇವಾನುದೇವತೆಗಳಿಂದಲೂ ತಿಳಿಯಲಿಕ್ಕೆ ಆಗುವುದಿಲ್ಲ' ಎನ್ನುತ್ತಾನೆ. 'ಭೂಲೋಕದಲ್ಲಿ ಯಾವ ವಸ್ತುವನ್ನಾದರೂ ಕೂಡಾಗ್ಲಿ ಬುಡಬವುದು ಪ್ರಾಣಾಪ್ತಳಾದ ಸತಿಯನ್ನು ಬುಟ್ಹೋಗಕ್ಕಾಗೋದಿಲ್ಲ' ಎನ್ನುತ್ತಾನೆ. ಈ ಮಾತಿನಿಂದ ಸಂಕಮ್ಮನ ಮೇಲಿರುವ ಪ್ರೀತಿಯ ತೀವ್ರತೆ, ಉತ್ಕಟತೆ, ಅನನ್ಯತೆ ನಮಗೆ ತಿಳಿಯುತ್ತದೆ. ಆದರೆ ಇಷ್ಟು ದಿನಗಳವರೆಗೆ ತನ್ನ ಜೊತೆ ಸಂಸಾರ ಮಾಡಿದ ಹೆಂಡತಿಯನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲಾಗದ ಸ್ಥಿತಿಯೂ ಹೌದು. ಅವನು ಒಳ್ಳೆಯ ವ್ಯಕ್ತಿಯಾಗಿರುವಂತೆ ಮುಂಗೋಪಿಯೂ ಹೌದು. ಅತ್ತೆಯ ಹೂವ ನೋಡಬಹುದು ಬಿಳೀಕಾಗೆ ನೋಡಬಹುದು, ಮೀನಿನ ಹಜ್ಜೆ ನೋಡಬಹುದು ಹೆಣ್ಣು ಜಾತಿಯನ್ನು ನಂಬಲು ಸಾಧ್ಯವಿಲ್ಲ ಅನ್ನುತ್ತಾನೆ. ಮೀನು ಬಲೆಹಾಕಿದವನು ಯಾವನಾದರೂ ಅವನ ಬಲೆಗೆ ಬೀಳುತ್ತದೆ. ಇಂತಹವನೇ ಆಗಬೇಕೆಂದಿಲ್ಲ. ಹಾಗೆ ಹೆಣ್ಣಿಗೂ ಕೂಡ ಇಂತಹ ವ್ಯಕ್ತಿಯೇ ಆಗಬೇಕೆಂದಿಲ್ಲ ಯಾವನೊಂದಿಗಾದರೂ ಸಂಸಾರ ಮಾಡುತ್ತಾಳೆ ಎನ್ನುತ್ತಾನೆ. ನೀಲಯ್ಯನು ಕೆಲವು ಮಾತುಗಳನ್ನು ಅತಿರೇಕವೆಂಬಂತೆ ಆಡುತ್ತಾನೆ. ತನ್ನ ಮಾತುಗಳ ಮೇಲೆ ಅರಿವಿಲ್ಲದೆ ಕೇವಲ ಭಾಷೆ ಪಡೆದುಕೊಳ್ಳಬೇಕೆಂಬ ಏಕೈಕ ಉದ್ದೇಶದಿಂದ ಸಂಕಮ್ಮನನ್ನು ಅತ್ಯಂತ ಹೀನಾಯವಾಗಿ ನಡೆಸಿಕೊಳ್ಳುತ್ತಾನೆ. ಆದರೆ ಸಂಕಮ್ಮನಾದರೂ ತನ್ನ ವ್ಯಕ್ತಿತ್ವಕ್ಕೆ ಕಪ್ಪು ಚುಕ್ಕಿಯಾಗುವ ಭಾಷೆಯನ್ನು ಕೊಡುವುದಿಲ್ಲ. ಇಂತಹ ಪ್ರಯುತ್ನಗಳನ್ನು ಅವಳು ಬೆಂಬಲಿಸುವುದಿಲ್ಲ. ಇಲ್ಲಿಯುವರೆಗೆ ಪತಿವ್ರತೆಯಾಗಿರುವುದಕ್ಕೆ ಇದು ಅವಮಾನ ಎನ್ನುತ್ತಾಳೆ. ಪ್ರತಿಯೊಬ್ಬರಿಗೂ ಸ್ವಾಭಿಮಾನವಿರುತ್ತದೆ. ಅದರಲ್ಲೂ ಮುಖ್ಯವಾಗಿ ನಡತೆಯ ಬಗ್ಗೆ ಸಂದೇಹ ಸಂಶಯಗಳಿಗೆ ಹೆಣ್ಣು ಯಾವತ್ತು ಸೊಪ್ಪು ಹಾಕುವುದಿಲ್ಲ. ಇಲ್ಲಿ ಸಂಕಮ್ಮ ನೀಲಯ್ಯನಿಗೆ ಸರಿಸಮನಾಗಿ ನಿಂತು ಆದರೆ ಗಂಡನೆಂಬ ಪ್ರೀತಿಯೊಂದಿಗೇ ವಾದಿಸುತ್ತಾಳೆ, ತರ್ಕಿಸುತ್ತಾಳೆ. ಕಡೆಗೆ ನೀಲಯ್ಯ 'ನಾನು ನಿನ್ನನ್ನು ತಂದಿದ್ದೇನೋ ನೀನೇ ನನ್ನನ್ನು ತಂದಿದ್ದೀಯೋ, ನನಗೆ ನೀನೇ ಗಂಡನಂತೆ ಮಾತನಾಡಿದ್ದೀಯೇ' ಎಂದನು. ನೀನು ಬಲಗೈ ಭಾಷೆಯನ್ನು ಕೊಡುತ್ತೀಯೋ ಇಲ್ಲ ಜೀವಕ್ಕೆ ಬುದ್ಧಿ ಹೇಳಿಯೋ ಎಂದು ಬೆದರಿಸಿ ಪೀಡಿಸುತ್ತಾನೆ. ಪ್ರಾಯಶಃ ಹೆಣ್ಣಿಗೆ ಎಷ್ಟು ಅವಮಾನ ಮಾಡಬಹುದು ಎಂಬುದಕ್ಕೆ ಇದೇ ಸರಿಯಾದ ಉದಾಹರಣೆಯಾಗುತ್ತದೆ. ಅತಿರೇಕಕ್ಕೆ ಹೋದಾಗ ಸಂಕಮ್ಮನು ತನ್ನತನ ಉಳಿಸಿಕೊಳ್ಳುವುದಕ್ಕೆ ದಿಟ್ಟೆಯಾಗಿ ಬಾಳುವೆ ಮಾಡುವುದಕ್ಕೆ ಹೆದರದೆ ಗಂಡನಿಂದ ಹಿಂದಿರುಗುವ ಮಾತನಾಡುತ್ತಾಳೆ.

"ನೀನು ಕೊಟ್ಟಿದ್ದ ತೆರವ ತಕ್ಕಯ್ಯ
ನನ್ನ ಹಟ್ಟಿಂದಾಚ್ಕೆ ಕಳುವಯ್ಯ
ನಿನ್ನ ದಾರ್ಯ ನೀನು ನೋಡಯ್ಯ
ನನ್ನ ದಾರ್ಯ ನಾನು ನೋಡೀನಿ
ನಾನು ಬಲಗೈ ಮುಟ್ಟಿ ಭಾಷೆ ಕೊಡುವಂತ
ಮಗಳಲ್ಲ ಹೋಗೋ ಯಜಮಾನ"[16]

ಅತ್ಯಂತ ನಿಷ್ಠುರವಾಗಿ ಈ ಮಟ್ಟಿನ ಉತ್ತರವನ್ನು ತನ್ನ ಗಂಡನಿಗೆ ನೀಡಿದ ಯಾವ ಹೆಣ್ಣು ಕೂಡ ಇರಲಾರಳು. ಮತ್ತೊಂದು ಗಮನಿಸಬೇಕಾದ ಅಂಶವೆಂದರೆ ಬುಡಕಟ್ಟು ಸಮುದಾಯಗಳಲ್ಲಿ ಮರುಮದುವೆ,

ಕೂಡಿಕೆ ಇವುಗಳು ಆಚರಣೆಯಲ್ಲಿರುವುದರಿಂದ ಯಾವುದೇ ಹೆಣ್ಣು ಕೂಡ ಹೆಚ್ಚು ಶೋಷಣೆಗೆ ವಿಶೇಷವಾಗಿ ಬುಡಕಟ್ಟು ಸಮುದಾಯಗಳಲ್ಲಿ ಬಲಿಯಾಗುವುದಿಲ್ಲ. ಅದೇ ಕಾರಣಕ್ಕಾಗಿ ನೀಲಯ್ಯನಿಗೆ ಸಂಕಮ್ಮ ಈ ಪರಿದಿಟ್ಟ ಉತ್ತರ ನೀಡಲು ಸಾಧ್ಯವಾಗಿದೆ. ಪ್ರತಿಯೊಬ್ಬರು ಒಂದು ಹಂತದವರೆಗೆ ಶೋಷಣೆ, ದೌರ್ಜನ್ಯ, ಹಿಂಸೆ, ಅವಮಾನಗಳನ್ನು ಸಹಿಸಿದರೂ ಅಂತಿಮ ಹಂತದಲ್ಲಿ ಅದು ಸ್ಫೋಟಗೊಳ್ಳುತ್ತದೆ. ಮತ್ತೆ ಹಿಂತಿರುಗಿ ಶೋಷಕರಿಗೆ ದೌರ್ಜನ್ಯ ನಡೆಸುವವರಿಗೆ ಅದೇ ಅಸ್ತ್ರಗಳಿಂದ ಪರಿಣಾಮಕಾರಿಯಾಗಿ ಪ್ರತಿಕ್ರಿಯಿಸುತ್ತಾರೆ. ಹೀಗಿರುವಾಗ ಪಿತೃಪ್ರಧಾನ ವ್ಯವಸ್ಥೆಗೆ ತೆರೆದುಕೊಳ್ಳುತ್ತಿರುವ ಆದರೆ ಮಾತೃಮೂಲೀಯ ಗುಣಗಳು ಸಂಪೂರ್ಣ ಮರೆಯಾಗದ ಸಂದರ್ಭದಲ್ಲಿ ಪರಿಸ್ಥಿತಿಯಲ್ಲಿ ಸಂಕಮ್ಮ ಈ ಮಾತುಗಳನ್ನಾಡುವುದು ಗಮನಾರ್ಹ, ಪರಿಶೀಲನಾರ್ಹ. ಪ್ರತಿಯೊಂದು ಜೀವಿಗೂ ಜೀವಿಸುವ ಹಕ್ಕು ಪ್ರಕೃತಿದತ್ತವಾದದ್ದು ಆದರೆ ಕೇವಲ ಒಬ್ಬ ಮಾತ್ರ ಇತರ ಜೀವಿಗಳ ಮೇಲೆ ಹಿಡಿತ ಸಾಧಿಸುವುದು. ಪ್ರಕೃತಿಯಲ್ಲಿನ ಅಸಮತೋಲನೆಗೆ ದಾರಿಯಾಗುತ್ತದೆ. ಅಶಾಂತಿ ಉಂಟಾಗುತ್ತದೆ. ಹಾಗೆ ಬದುಕಿನಲ್ಲಿ ಅಂದರೆ ಕುಟುಂಬದಲ್ಲಿ ಗಂಡು ಹೆಣ್ಣುಗಳಿಗೆ ಸಮಾನ ಪ್ರಾತಿನಿಧ್ಯವಿದ್ದಾಗ ಮಾತ್ರ ಸಂಸಾರ ಸುಗಮವಾಗಿ ಸಾಗುತ್ತದೆ. ಆದರೆ ಕೇವಲ ಪುರುಷನ ದಬ್ಬಾಳಿಕೆ, ಹಿಡಿತ, ಶೋಷಣೆ ಅತಿಯಾದಾಗ ಕುಟುಂಬ ವಿಘಟನೆಗೆ ಕಾರಣವಾಗುತ್ತದೆ. ಇಲ್ಲಿ ಸಂಕಮ್ಮ ಕೂಡ ನೀಲಯ್ಯನನ್ನು ತೊರೆದು ಪ್ರತ್ಯೇಕ ಸ್ವತಂತ್ರ ಜೀವನ ನಡೆಸುವುದಾಗಿ ತಿಳಿಸುತ್ತಾಳೆ. ವಿಪರೀತ ಸಂಕೋಲೆಗಳ ನಡುವೆ ಗಂಡನ ಜೊತೆ ಇರುವುದಕ್ಕಿಂತ, ಒಬ್ಬಳೇ ಸಹಜವಾಗಿ ಯಾರ ಮುಲಾಜಿಗೂ ಒಳಗಾಗದೆ ಬದುಕುವುದಾಗಿ ಹೇಳುತ್ತಾಳೆ. ಈ ಸನ್ನಿವೇಶ ಬುಡಕಟ್ಟು ಸಮುದಾಯ ವ್ಯವಸ್ಥೆ ಮತ್ತೆ ಮಾತೃಪ್ರಧಾನ ವ್ಯವಸ್ಥೆಯಾಗಿ ಪರಿವರ್ತನೆಯಾಗಲು ಸಾಧ್ಯ ಎನ್ನುವುದನ್ನು ಕೂಡ ತಿಳಿಸುತ್ತದೆ. ಸಂಕೋಲೆಗಳಿಂದ ಮುಕ್ತವಾದ ಜೀವನಕ್ಕೆ ಸಂಕಮ್ಮ ತೆರೆದುಕೊಳ್ಳಲು ಹವಣಿಸುತ್ತಾಳೆ.

ಹೆಂಡತಿಯ ತೀವ್ರ ಪ್ರತಿಭಟನೆಯ ನಡುವೆ ನೀಲಯ್ಯ ತಾನು ಹೆಂಡತಿಗೆ ಸೋಲಕೂಡದು, ಪತಿ ಪತ್ನಿ ಇಬ್ಬರೂ ಪರಸ್ಪರರ ಮಾತುಗಳನ್ನು ಗೌರವಿಸಬೇಕು. ಆದರೆ ತನ್ನ ಸತಿಯಾದ ಸಂಕಮ್ಮ ಇಂತಹ ಮಾತು ಆಡುತ್ತಿದ್ದಾಳಲ್ಲ. ತನ್ನ ಪ್ರಾಣ ಸಮಾನಳಾಗಿ ಇವಳನ್ನು ಕಂಡಿದ್ದೆ ಈಗ ತನ್ನ ದಾರಿ ತನಗೆ ನಿನ್ನ ದಾರಿ ನಿನಗೆ ಎನ್ನುತ್ತಿದ್ದಾಳಲ್ಲ ಎಂದು ಕೋಪಗೊಳ್ಳುತ್ತಾನೆ.

> "ಹೆಂಗ್ಸು ಎಂತೇ ಮಾತಾಡ್ತಿದಾಳೆ
> ನನ್ನ ದಾರಿ ನಾನ್ನೋಡ್ಕೇಕಂತೆ ಇವುಳ್ದಾರಿ ಇವುಳ್ನೋಡ್ಕೊತಂತೆ
> ಇಂತೆ ಹೆಂಗ್ಸ ಬಿಡಕಾಗ್ದು
> ಇವುಳ್ಗೆ ತಕ್ಕನಾದ ಬಂದೋಬಸ್ತಿ ಮಾಡ್ಬೇಕು
> ಕೊಲೆ ಕಷ್ಟ ಕೊಡಬೇಕು"[17]

ಎಂದುಕೊಳ್ಳುತ್ತಾನ. ಗಂಡಸಾದವನ ಮುಂದೆ ಈ ಮಾತನ್ನು ಆಡಿದ್ದಾಳಲ್ಲ ಇವಳನ್ನು ಸುಮ್ಮನೆ ಬಿಡಬಾರದು, ಇವಳಿಗೆ ತಕ್ಕನಾದ ಪಾಠವನ್ನು ಕಲಿಸಬೇಕು, ಕೊಡಬಾರದ ಕೊಲೆಕಷ್ಟವನ್ನು ಕೊಡಬೇಕು ಎಂದು ರುದ್ರಗೋಪವನ್ನು ತಾಳಿದ್ದಾನೆ. ಯಕಶ್ಚಿತ್ ಒಂದು ಹೆಣ್ಣು ತನ್ನ ಸ್ಥಾನಮಾನ ತಿಳಿಯದೆ ಈ ರೀತಿ

ಮಾತನಾಡುತ್ತಿದ್ದಾಳಲ್ಲ ಎಂದು,

"ಮಡ್ಡಿ ಮಾತ ಕೇಳವುನೆ
ರುದ್ರರಗ್ವಾಪ ತಾಳವ್ನೆ
ಕೆಂಜರುಗಣ್ಣ ಬಿಟ್ಟವುನೆ
ಕಾಕನಾದ್ರೆ ಹೊಡುದವುನ
ಮುದ್ದು ಮೀಸ್ಯಾ ತಿರುವವುನೆ
ಬೀಸು ಮಚ್ಚ ತಗುದವುನೆ
ಮಡ್ಡಿ ಮುಂದಲೆ ಹಿಡುದವುನೆ
ಅವ್ನು ಧರ್‍ರಾ ಧರ್‍ರಾ ಧರ್‍ರಾ ಧರ್‍ರ್‍ನ
ಎಳುಕೊಂಡೆಳ್ಕೊಂಡ್ ಬತ್ತಾನೆ"[18]

ಅವನ ಕೋಪದ ತೀವ್ರತೆ ಉತ್ಕಟತೆ ಗಮನೀಯವಾದದ್ದು. ಯಾರೂ ಇರದ ಸ್ಥಳದಲ್ಲಿ ಸಂಕಮ್ಮನ ಮುಂದೆ ಈ ರೀತಿ ಆರ್ಭಟಿಸುತ್ತಿದ್ದಾನೆ. ಕಾಕನಾದ್ರೆ ಹೊಡುದವುನೆ ಅವನ ಕೋಪ ಮೇರೆ ಮೀರಿದೆ. ಸತಿ ತನ್ನ ಮಾತನ್ನೆ ಕೇಳುತ್ತಿಲ್ಲ. ತನ್ನ ಮಾತಿಗೆ ಬೆಲೆ ಕೊಡುತ್ತಿಲ್ಲ ಎಂದು, ಮಚ್ಚನ್ನು ತೆಗೆದು ಆರ್ಭಟಿಸಿದರೂ ಸಂಕಮ್ಮಳನ್ನು ಏನೂ ಮಾಡಲಾಗುವುದಿಲ್ಲ, ಏನೂ ಮಾಡುವುದಿಲ್ಲ. ಏಕೆಂದರೆ ಇಂತಹ ಸಂದರ್ಭದಲ್ಲಿ ಆಕೆಯ ಮೇಲಿರುವ ಒಲವು ಅವನನ್ನು ತಡೆದಿದೆ. ಪುರುಷನಿಗೂ ಕೂಡ ಒಂದು ಮಿತಿ ಇದೆ ಎಂದು ನಾವಿಲ್ಲಿ ಗಮನಿಸಬೇಕು. ಜೊತೆಗೆ ಅವಳಲ್ಲಿನ ನಿಷ್ಠೆಯ ಬಗೆಗಿನ ಅರಿವು ಕೂಡ ನೀಲಯ್ಯನನ್ನು ನಿಯಂತ್ರಿಸುತ್ತಿರಬಹುದು. ಅದೇ ಕಾರಣವಾಗಿ ಅವನನ್ನು ಈ ಬಗೆಯ ದುಷ್ಟ ಕೃತ್ಯಗಳಿಗೆ ಪ್ರೇರೇಪಿಸುತ್ತಿರಬಹುದು. ಎರಡೂ ಬಗೆಯ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಅವಳ ಮುಡಿಯನ್ನು ಹಿಡಿದು ಕಲ್ಲು ಮುಳ್ಳು ಎನ್ನದೆ ಎಳೆದುಕೊಂಡು ಬರುತ್ತಿದ್ದಾನೆ. ಗಂಡನ ಕ್ರೌರ್ಯದ ಪರಮಾವಧಿಗೆ ಇದು ನಿದರ್ಶನ. ಪ್ರತ್ಯೇಕವಾಗಿ ಒಂದು ಗುಡಿಸಲು ಕಟ್ಟಿಕೊಂಡು ಕಾಡಿನ ನಡುವೆ ಜೀವಿಸುತ್ತಿದ್ದಾನೆ. ಆದರೆ ತನ್ನ ಮಡದಿಯನ್ನು ಆ ದೊಡ್ಡಿಯಲ್ಲೂ ಬಿಡದೆ ಅದಕ್ಕಿಂತಲೂ ದಟ್ಟವಾದ ಕಾಡಿನೊಳಗೆ, ಮನುಷ್ಯ ಸಂಚಾರವೇ ಇಲ್ಲದಿರುವ ಕಡೆ, ಕಾಗೆ ಗೂಬೆಗಳೂ ಇಲ್ಲದ ಕಡೆ ಕರೆದುಕೊಂಡು ಬರುತ್ತಿದ್ದಾನೆ. ಅಂದರೆ ಕಾಗೆ ಗೂಬೆಗಳೂ ವಾಸಿಸಲು ಯೋಗ್ಯವಲ್ಲದ ಅತ್ಯಂತ ಕಷ್ಟದ ಸ್ಥಳದಲ್ಲಿ ಅವಳನ್ನು ಎಳೆದುಕೊಂಡು ಬಂದಿದ್ದಾನೆ. ಇಲ್ಲಿಯೂ ಕೂಡ ಭಾಷೆ ಕೊಡುವಂತೆ ಕೇಳುತ್ತಾನೆ. ಆದರೆ ಸಂಕಮ್ಮ ಭಾಷೆಯನ್ನು ಕೊಡಲು ಪ್ರಬಲವಾಗಿ ನಿರಾಕರಿಸುತ್ತಾಳೆ. ಎಳೆದುಕೊಂಡು ಬರುವಾಗ ಕೈ ಕಾಲೆಲ್ಲ ಕಿತ್ತಿದೆ. ಆಗ ನೀಲಯ್ಯ ಅವಳ ಮುಂದಲೆಯನ್ನು ಹಿಡಿದು ಬೆತ್ತದಿಂದ ಹೊಡೆಯುತ್ತಾನೆ. ಅವಳಿಗಾಗಿಯೇ ಮತ್ತೊಂದು ಒಂಟಿ ದೊಡ್ಡಿಯನ್ನು ನಿರ್ಮಿಸುತ್ತಾನೆ. ಬೇಟೆಗೆ ಹೊರಡುವಾಗಿನ ವರ್ಣನೆ ಸೋಲಿಗರ ಜೀವನ ಪದ್ಧತಿಗೆ ಹಿಡಿದ ಕನ್ನಡಿಯಾಗಿದೆ. ಈ ಮಹಾಕಾವ್ಯ ಸಾಂಸ್ಕೃತಿಕ ವಿವರಗಳನ್ನು ದಟ್ಟವಾಗಿ ಪ್ರಕಟಿಸುತ್ತದೆ.

"ಒಂದು ಚಕಳದ ಚಡ್ಡಿ ಇಕ್ಕವುನೆ
ಒಂದು ಹನುಮಂತ ಪರುಮೇಳ ಧರುಸವುನೆ

ಒಂದು ಬೂದುಗಂಬ್ಳೀಯ ತಗುದವ್ನೆ
ಅವ್ನು ಹೆಗಲಮ್ಯಾಲೆ ಹಾಕವ್ನೆ
ಒಂದು ಬೀಸು ಮಚ್ಚು ತಗುದವ್ನೆ
ಒಂದು ಹೆಜ್ಜೇನು ಕತ್ತಿ ತಗುದವ್ನೆ
ಒಂದು ಕಿರುಜೇನು ಕತ್ತಿ ತಗುದವ್ನೆ
ಅವ್ನು ತಟ್ಟೀ ಹೊರ್ಕ್ಯೀಲಿ ಮಡಗವ್ನೆ
ಒಂದು ಹೆಜ್ಜೇನು ಗಡ್ಗೆ ತಗುದವ್ನೆ
ಅವ್ನು ಬೆನ್ನಗಾದರೆ ಬಿಗುದವ್ನೆ
ಒಂದು ಕಾಳುನಾಯ ಕರುದವನೆ
ಒಂದು ಬ್ಯಾಟಿನಾಯ ಕರುದವ್ನೆ"[19]

ಬುಡಕಟ್ಟು ಸಮುದಾಯವಾದ ಸೋಲಿಗರು ಬೇಟೆಗೆ ಯಾವ ರೀತಿ ಹೊರಡುತ್ತಿದ್ದರು ಎನ್ನುವುದು ತಿಳಿಯುತ್ತದೆ. ಬೇಟೆಗೆಂದೇ ಧರಿಸುತ್ತಿದ್ದ ಚಕ್ಕಳದ ಚಡ್ಡಿ ಎಂದರೆ ಅತಿ ಹೆಚ್ಚು ಬಾಳಿಗೆ ಬರುವ ಉಡುಪು ಇದಾಗಿದೆ. ಅವನು ಒಂದಿರುಗಲು ಒಂಬತ್ತು ತಿಂಗಳು ಒಡಿಯುತ್ತದೆ. ಹಾಗಾಗಿ ಅಲ್ಲಿಯವರೆಗೆ ಬಾಳಿಕೆಯಾಗುವ ಉಡುಪು ಈ ಚಕ್ಕಳದ ಅಥವಾ ಚರ್ಮದ ಚಡ್ಡಿ. ಬೂದುಕಂಬಳಿಯ ಹೆಗಲ ಮೇಲೆ ಹಾಕುವುದು. ಇದು ಚಳಿಯಾದಾಗ ಹೊದೆಯಲು, ಹಾಸಿಕೊಂಡು ಮಲಗಲು ಬಳಕೆಯಾಗುತ್ತದೆ. ಮಚ್ಚು, ಗಡ್ಗೆ, ಕಂಬಳಿ, ಬೇಟೆನಾಯಿ ಇವುಗಳನ್ನು ಬೇಟೆಗೆಂದು ಹೊರಟಾಗ ತಮ್ಮ ಜೊತೆಯಲ್ಲಿರಿಸಿಕೊಳ್ಳುತ್ತಿದ್ದರು. ಈ ಪ್ರತಿಯೊಂದು ವಸ್ತುವೂ ಕೂಡ ತನ್ನದೇ ಆದ ವಿಶೇಷ ಕೆಲಸವನ್ನು ಬೇಟೆಯ ಸಂದರ್ಭದಲ್ಲಿ ಮತ್ತು ಆನಂತರದಲ್ಲಿ ನಿರ್ವಹಿಸುತ್ತಿತ್ತು. ಗಡುಗೆ ಜೇನು ತುಪ್ಪವನ್ನು ಸಂಗ್ರಹಿಸಲು ನಾಯಿ ಬೇಟೆಯಾಡಲು, ಕತ್ತಿ ಬಿದಿರನ್ನು ಕಡಿದೆ ಬಿದಿರಕ್ಕಿಯನ್ನು ಸಂಗ್ರಹಿಸಲು ಬಳಕೆಯಾಗುತ್ತಿತ್ತು.

ಸಂಕಮ್ಮನಿಗೂ ನೀಲಯ್ಯನ ಕ್ರೌರ್ಯದ ಮನವರಿಕೆಯಾಗುತ್ತದೆ. ಆದ್ದರಿಂದ ತನ್ನನ್ನು ಬಿಡಬೇಕೆಂದು ಕೇಳುತ್ತಾಳೆ. ಆದರೆ ನೀಲಯ್ಯ ತನ್ನ ನಿಲುವಿನಿಂದ ಒಂದು ಹೆಜ್ಜೆಯೂ ಹಿಂದೆ ಸರಿಯಲಾರ. ಸಂಕಮ್ಮ ನಿನ್ನ ಕೈಲಿರುವ ಕತ್ತಿಯಿಂದ ನನ್ನನ್ನು ಕತ್ತರಿಸಿದರೂ ಸರಿಯೇ ನಾನು ಮಾತ್ರ ಭಾಷೆ ಕೊಡುವುದಿಲ್ಲ ಎನ್ನುತ್ತಾಳೆ. ಇವಳನ್ನು ಹೀಗೆ ಬಿಟ್ಟರೆ ಬುದ್ಧಿ ಕಲಿಯುವುದಿಲ್ಲ ಭಾಷೆ ಕೊಡುವುದಿಲ್ಲ ಎಂದು ಅವಳು ಉಟ್ಟಿದ್ದ ಸೀರೆ ಬಿಚ್ಚಿಸಿಕೊಂಡಿದ್ದಾನೆ. ರವಿಕೆಯನ್ನು ಬಿಚ್ಚಿಸಿಕೊಂಡಿದ್ದಾನೆ. ಕತ್ತಿನಲ್ಲಿರುವ ತಾಳಿ, ಓಲೆ, ಕತ್ತೀನ ಸರ, ಕೈಯ್ಯೀನ ಕಡುಗ, ಬಳೆ ಎಲ್ಲವನ್ನು ಬಿಚ್ಚಿಸಿಕೊಳ್ಳುತ್ತಾನೆ. ಆಕೆಯ ಕೈಯಲ್ಲಿ ಪೊಟ್ಟಣ ಕಟ್ಟಿಸುತ್ತಾನೆ. ತನ್ನ ದೇಹದ ಮೇಲಿನ ಪ್ರತಿಯೊಂದು ವಸ್ತ್ರ ಒಡವೆಗಳನ್ನು ಕಳೆದು ತಾಯಿಯ ಹೊಟ್ಟೆಯಿಂದ ಹೇಗೆ ಬಂದಳೋ ಅದೇ ರೀತಿ ಸಂಕಮ್ಮ ನಿಂತಿದ್ದಾಳೆ. ಹೀಗಿರುವಾಗ ಸಂಕಮ್ಮ ದುಃಖವನ್ನು ಮಾಡುತ್ತಿದ್ದಳೇ ಹೊರತು ಗಂಡನನ್ನು ನೋಡಲಿಲ್ಲ. ತನ್ನ ಗಂಡ ಈ ರೀತಿ ಅವಮಾನಿಸಿದನಲ್ಲ ಎಂದು ಅವನ ಬಗ್ಗೆ ಅಸಹ್ಯದ ನಿಲುವು ತಳೆದಿದ್ದಳು. ಸಂಕಮ್ಮ ನೀಲಯ್ಯನ ಕಣ್ಣಿಗೆ ಚಂದ್ರನಂತೆ ಹೊಳೆದಂತೆ ಕಾಣುತ್ತಿದ್ದಾಳೆ. ಆಗ ತನ್ನ ಹೆಂಡತಿಯನ್ನು ಹೀಗೇ

ಬಿಟ್ಟುಹೋದರೆ ಯಾರಾದರೂ ಹಾರಿಸಿಕೊಂಡು ಹೋಗುತ್ತಾರೆ ಎಂದು, ಒಂದು ಹಳ್ಳಕ್ಕೆ ಹೋಗಿ ಉಗುನೀ ಹಂಬು, ಎಕ್ಕದ ಎಲೆ, ತೇಗದ ಎಲೆ ಇವುಗಳನ್ನು ಕಿತ್ತುಕೊಂಡು ಮಡದಿಯ ಹತ್ತಿರ ಬಂದಿದ್ದಾನೆ.

"ಅಯ್ಯ ಉಗುನೀ ಹಂಬ ತಗುದವುನೆ
ಉಡುಗೇನಾದ್ರೆ ಉಡುಸವುನೆ
ಎಕ್ಕದ ಎಲೆಯ ತಗುದವುನೆ
ಎದ್ಕಟ್ಟನಾದರೆ ಕಟ್ಟವುನೆ
ತೇಗನೆಲೆಯ ತಗುದವುನೆ
ಬೆನ್ನೀಗೆ ಮುಸುಕಹಾಕವ್ನೆ
ಕಂಬಳ್ಳಿ ಹಂಬ ತಗುದವುನೆ
ಕೈಕಾಲನೆಲ್ಲ ಬಿಗುದವನೆ
ಕಾರೆ ಮುಳ್ಳ ತಂದವುನೆ
ಕಣ್ಣಾದ್ರೆ ಹೊಲುದವನುನೆ
ಕೊಳ್ಳಿಕೆಮುಳ್ಳ ತಂದವುನೆ
ಕಿವಿಕರ್ಣನಾದರೆ ಚುಚ್ಚವುನೆ"[20]

ನೀಲಯ್ಯನ ದೌರ್ಜನ್ಯ ಎಲ್ಲೆ ಮೀರಿರುವುದನ್ನು ಈ ಸಾಲುಗಳು ಪ್ರತಿನಿಧಿಸುತ್ತವೆ. ಎಕ್ಕದ ಎಲೆಯನ್ನು, ತೇಗದ ಎಲೆಯನ್ನು ಉಗುನೀ ಹಂಬು ಇವುಗಳೇ ಉಡುಗೆಗಳಾಗಿವೆ. ಅವಳು ಯಾರನ್ನೂ ನೋಡಬಾರದೆಂದು ಕಾರೆ ಮುಳ್ಳಿನಿಂದ ಕಣ್ಣನ್ನು ಹೊಲೆದಿದ್ದಾನೆ. ಕೈಕಾಲನ್ನು ಕಟ್ಟಿದ್ದಾನೆ. ನೆಗ್ಗಿನ ಮುಳ್ಳನ್ನು ತಂದು ನೆತ್ತಿಗೆ ಚುಚ್ಚಿದ್ದಾನೆ. ಬಾಚೀ ಮುಳ್ಳು ಬಳಸಿ ಬಾಯಿಗೆ ಬೀಗ ಹಾಕಿದ್ದಾನೆ. ಕೊತ್ತೀ ಹಂಬನ್ನು ಬಳಸಿ ಹಿಂಕಟ್ಟನ್ನು ಕಟ್ಟಿದ್ದಾನೆ. ಗೊಬ್ಬಳಿ ಮುಳ್ಳು ತಂದು ಗೋಣುಗೆಲ್ಲ ಚುಚ್ಚವುನೆ. ಬೆಲ್ಲದ ನೀರನ್ನು ಚೆಲ್ಲಿನ ಇರುವೆಗಳನ್ನು ಬಿಟ್ಟಿದ್ದಾನೆ. ಎಡಗಡೆ ಬಲಗಡೆಗೆ ಹೊರಳದಂತೆ ಕತ್ತಿಯನ್ನು ನೆಟ್ಟಿದ್ದಾನೆ. ಹೀಗೆ ಅವಳಿಗೆ ಕಷ್ಟವನ್ನು ಇನ್ನಿಲ್ಲದಂತೆ ಕೊಟ್ಟು ನರಳುವಂತೆ ಮಾಡಿದ್ದಾನೆ. ಬೆಲ್ಲದ ನೀರು ಮೆತ್ತಿಕೊಂಡ ದೇಹವನ್ನು ಇರುವೆಗಳು ಪ್ರತಿಕ್ಷಣವೂ ಕಿತ್ತು ತಿನ್ನುವಂತೆ ಮಾಡಿದ್ದಾನೆ. ಹೊರಗಿನ ಶಬ್ದ ಕಿವಿಗಳಿಗೆ ಬೀಳದಂತೆ ಮಾಡಿದ್ದಾನೆ. ಮಾತನಾಡದಂತೆ ಬಾಯಿಯನ್ನು ನಿಷ್ಕ್ರಿಯಗೊಳಿಸಿದ್ದಾನೆ. ಮೇಲೆ ಏಳದಂತೆ ಒಂದು ಕಲ್ಲುಗುಂಡನ್ನು ತಂದು ಬೆನ್ನಮೇಲೆ ಇಟ್ಟಿದ್ದಾನೆ. ಇಷ್ಟರ ಮಟ್ಟಿಗೆ ಕಷ್ಟವನ್ನು ಕೊಟ್ಟು ಗೋಳಿಡಿಸುತ್ತಾನೆ. ಇಷ್ಟಾದರೂ ಕೂಡ ಮತ್ತೆ ಭಾಷೆಯನ್ನು ಕೊಡುವಂತೆ ಕೇಳುತ್ತಾನೆ. ಸಂಕಮ್ಮ ಆಗಲೂ ಕೂಡ ತನ್ನ ನಿಲುವನ್ನು ಸಡಿಲಿಸುವುದಿಲ್ಲ. ಆಗ ನೀಲಯ್ಯ ಅವಳನ್ನು ಯಾರೂ ನೋಡದಂತೆ ಕರೆದುಕೊಂಡು ಹೋಗದಂತೆ ಅವಳಿರುವ ಗುಡಿಸಲಿನ ಸುತ್ತ ಎಪ್ಪತ್ತೇಳು ಮಂಡಲವನ್ನು ಬರೆದು ಯಾರಾದರೂ ಈ ಮಂಡಲಗಳನ್ನು ದಾಟಿದರೆ ಅವರು ನಾಶವಾಗುವಂತೆ ಶಾಪ ನೀಡುತ್ತಾನೆ, ಕಾಳಿಂಗ ಸರ್ಪ ಮೊದಲಾದ ಹಾವುಗಳನ್ನು, ಕಾಡಿನ ದುಷ್ಟ ಪ್ರಾಣಿಗಳನ್ನು ಕರೆದು ಅಲ್ಲಿರಿಸಿ ಇಲ್ಲಿಗೆ ಯಾವನಾದರೂ ಬಂದರೆ ಅವನನ್ನು ಸಾಯಿಸಬೇಕೆಂದು ಆಜ್ಞಾಪಿಸುತ್ತಾನೆ. ಮರದಲ್ಲಿ ರಾಕ್ಷಸಗೊಂಬೆಗಳನ್ನು ಮಾಡಿ ಅವುಗಳಿಗೆ ಜೀವವನ್ನು ತುಂಬಿ 'ನಾನಿಲ್ಲದಿರುವ ಸಂದರ್ಭದಲ್ಲಿ ಯಾರು ಬಂದರೂ ಅವರ ತಲೆಯನ್ನು

ಕತ್ತರಿಸಿ ತೋರಣ ಕಟ್ಟುವಂತೆ ಆದೇಶಿಸುತ್ತಾನೆ.' ಸಂಕಮ್ಮನಿಗೆ 'ನೀನು ಈ ಕಷ್ಟದಲ್ಲಿ ಗುಡಿಸಲಿನಲ್ಲಿ ಅನ್ನ ನೀರು ಇಲ್ಲದೆ ನಾನು ಬರೋ ಹೊತ್ಗೆ ಪ್ರಾಣಬಿಡು' ಎನ್ನುತ್ತಾನೆ. ತನ್ನ ಬೇಟೆ ಸಾಮಗ್ರಿಗಳನ್ನು ತೆಗೆದುಕೊಂಡು ಕುಲದವರೊಂದಿಗೆ ಕೂಡಿಕೊಳ್ಳಲು ಹೋಗುತ್ತಾನೆ.

ಅತ್ಯಂತ ಕಡುಕಷ್ಟವನ್ನು ಸಂಕಮ್ಮ ಅನುಭವಿಸುತ್ತಿದ್ದಾಳೆ. ಅವಳು ಎಲ್ಲ ದೇವರಿಗೂ ತನ್ನ ಶೋಕವನ್ನು ದುಃಖವನ್ನು ನಿವೇದಿಸಿಕೊಳ್ಳುತ್ತಾಳೆ. ಅತ್ಯಂತ ಅಸಹಾಯಕ ಸ್ಥಿತಿಯಲ್ಲಿ ಸಂಕಮ್ಮ ಇದ್ದಾಳೆ. ಯಾವ ದೇವರಿಗೂ ತನ್ನ ಶೋಕ ಅರಿವಾಗಿಲ್ಲ ಎಂದು ತನ್ನ ತಂದೆ ಮನೆಯ ದೇವರಾದ ಮಲೆಯ ಮಾದೇಶ್ವರನಿಗೆ ಕಷ್ಟದಿಂದ ಪಾರುಮಾಡುವಂತೆ ಪ್ರಾರ್ಥಿಸುತ್ತಾಳೆ. ಉರಿಗದ್ಗೆ ಮೇಲೆ ಮಾದೇಶ್ವರ ಒರಗಿದ್ದಾಗ ಸತ್ಯುವಂತ ಶರಣೆ ಸಂಕಮ್ಮನ ಕಣ್ಣೀರು ಅವರಿಗೆ ಅರಿವಾದವು. 'ಸತ್ಯವಂತೆ ಅತ್ತಂತ ಕಣ್ಣೀರು ಏಳ್ಮಲೆ ಹೆತ್ತಯ್ಯನ ಮುತ್ತುನ ಜೋಳ್ಗೆ ಮಾಲ್ಯೆ ಬಿದ್ದವು. ಸ್ವಾಮಿ ಕಣ್ಣುಬಿಟ್ಟು ರಾಜ್ಯವನ್ನು ನೋಡಿದರು. ಯಾರೋ ಕಾಣೆ ಪತಿರೊತಾ ಶಿರೋಮಣಿ ಶೋಕವನ್ನು ಮಾಡುತ್ತಿದ್ದಾಳಲ್ಲ ಎಂದು ಇವಳ ಕಣ್ಣೀರನ್ನು ತಪ್ಪಿಸಬೇಕು ಎಂದು ಹೊರಡುತ್ತಾರೆ. ಹುಲಿಯ ಸವಾರಿಯನ್ನು ಮಾಡುತ್ತ ಬೆಟ್ಟದಿಂದ ಇಳಿದು ಸಂಕಮ್ಮನಿರುವ ಜಾಗವನ್ನು ಹುಡುಕಿಕೊಂಡು ಬರುತ್ತಾರೆ. ಸಂಕಮ್ಮ ಕಷ್ಟದಲ್ಲಿದ್ದರೂ ಮಾದೇವನ ಸ್ಮರಣೆಯನ್ನು ಮಾಡುತ್ತಿರುತ್ತಾಳೆ. ಮಾದೇಶ್ವರನಿಗೆ ಸಂಕಮ್ಮ ಕಷ್ಟದಲ್ಲಿದ್ದರೂ ನನ್ನ ಸ್ಮರಣೆಯನ್ನು ಬಿಟ್ಟಿಲ್ಲವಲ್ಲ ಎಂದು ಅಲ್ಲಿಗೆ ಬಂದ ತಕ್ಷಣ ಅವಳ ಭಕ್ತಿಗೆ ಮೆಚ್ಚಿಕೊಳ್ಳುತ್ತಾನೆ. ಮಾದೇಶ್ವರ ಸ್ತ್ರೀವಾದಿ ನಿಲುವನ್ನು ತಳೆಯಲು ಮೂಲ ಕಾರಣವಾಗಿ ಇದನ್ನೇ ಪರಿಗಣಿಸಬೇಕು. ಮಾದೇಶ್ವರ ಸಂಕಮ್ಮನಿರುವ ಸೊಪ್ಪಿನ ಗುಡಿಸಲು ಹತ್ತಿರ ಬಂದು ನೀಲೇಗೌಡನ ಜಾಟವಿದ್ಯಾ ಬಯಲು ಮಾಡಿ ಅಲ್ಲಿ ಕಟ್ಟಿದ್ದ ಕಾಡುಪ್ರಾಣಿಗಳನ್ನು ಬಿಡಿಸುತ್ತಾನೆ. ರಾಕ್ಷಸ ಗೊಂಬೆಗಳನ್ನು ನಾಶಮಾಡುತ್ತಾನೆ.'

ಮಾದೇಶ್ವರ ಸಂಕಮ್ಮನ ದೃಢಭಕ್ತಿಯನ್ನು ಪರೀಕ್ಷಿಸಲು ಸಾಮಾನ್ಯ ಜಂಗಮನ ವೇಷದಲ್ಲಿ ನಿಂತು ಭಿಕ್ಷೆಯನ್ನು ಸಾರುತ್ತಾನೆ. ಹೀಗೆ ಭಿಕ್ಷೆ ಸಾರಿದ ಕೂಡಲೆ ಸಂಕಮ್ಮನ ಬಾಯಿ ಬೀಗ ಕಳೆದು ಮಾತನಾಡುತ್ತಾಳೆ. ಆಗ ಸಂಕಮ್ಮ ಯಾವ ಮಾಟಗಾರನೊ ಎಂದು ಶಂಕಿಸುತ್ತಾಳೆ. ಮಾದೇಶ್ವರ ಎಂದು ತಿಳಿಯದೇಅವನು ಯಾರು? ಯಾವ ದೇಶ? ಎಂದು ಕೇಳುತ್ತಾಳೆ. ಆಗ ಉತ್ತರ ದೇಶದಲ್ಲಿ ಹುಟ್ಟಿ, ಕತ್ತಲ ರಾಜ್ಯದಲ್ಲಿ ಬೆಳೆದು ಕುಂತೂರು ಮಠದಲ್ಲಿ ದೀಕ್ಷೆ ಆಗಿರುವುದಾಗಿ ಹೇಳುತ್ತಾನೆ.

"ಪರನಾರೀ ಸೋದ್ರನಾಗಿ
ಹೆಣ್ಣು ಅಂದ್ರೆ ಹೆತ್ತು ತಾಯಿ ಮಾಡ್ಕೊಂಡು
ಮಣ್ಣು ಅಂದ್ರೆ ಮುತ್ತಾಯಿ ಮಾಡ್ಕೊಂಡು
ಚಿನ್ನುಕ್ಕಾಗಿ ಚಿಂತೆ ಮಾಡ್ದೆ ಹಣುಕ್ಕಾಗಿ ಹಟ ಮಾಡ್ದೆ
ಹೆಣ್ಣು ಮಣ್ಣು ಕರೀತಲೆ ಜಾತಿಕಣೆತ್ತಿನ ನೋಡ್ಬಾರ್ದು
ಕರ್ಮಾ ಹೊತ್ಕೊಳ್ಬಾರ್ದು ಅಂತ್ಹೇಳಿ

.......................

ನಾನು ನಂಬಿದೋರ ಮನೆಯಲ್ಲಿ

ತುಂಬಿ ತುಳುಕಾಡುವಂತ ಮಾದಪ್ಪ ನನಕಂದ

ನನ್ನ ನೆಂಬುಲಾರ್ದ ಮುಂಡೇ ಮಕ್ಕಳ್ಗೆ

ಹನ್ನೆರಡನೇ ಕಡೆ ಸನೀಶ್ವರ ನನಕಂದ

ನಿಮ್ಮಪ್ಪನ ಮನೆ ಮಂದೆವ್ರು ಮಾದೇವ ನನಕಂದ"[21]

ಈ ಮೇಲಿನ ಮಾತುಗಳಿಂದಲೇ ಮಾದೇಶ್ವರನಿಗೆ ಸ್ತ್ರೀಯರ ಬಗ್ಗೆ ಇರುವ ನಿಲುವನ್ನು ತಿಳಿದುಕೊಳ್ಳಬಹುದು. ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿ ಪರಿಗಣಿಸದೆ ಹೆಣ್ಣಿಗೆ ಸಹೋದರನಾಗಿರುತ್ತೇನೆ. ಹೆಣ್ಣು ಅಂದರೆ ತಾಯಿ, ಹಣಕ್ಕಾಗಲಿ, ಚಿನ್ನಕ್ಕಾಗಲೀ ಆಸೆ ಪಡದ, ಚಿಂತೆ ಮಾಡದ ನಿನ್ನ ತಂದೆ ಮನೆಯ ದೇವರಾದ ಮಾದೇವ ಎನ್ನುತ್ತಾನೆ. ನನ್ನನ್ನು ನಂಬಿದವರಿಗೆ ಸಕಲೈಶ್ವರ್ಯಗಳನ್ನು ಕೊಡುತ್ತೇನೆ. ದುಷ್ಟರಿಗೆ ಶನಿಯಂತೆ ಕಾಡುತ್ತೇನೆ, ಕಷ್ಟ ಕೊಡುತ್ತೇನೆ ಎನ್ನುತ್ತಾನೆ. ವಿಶೇಷವಾಗಿ ಸ್ತ್ರೀವಾದಿ ನಿಲುವನ್ನು ಸ್ತ್ರೀಪರ ಕಾಳಜಿಯನ್ನು ಮಾದೇಶ್ವರನ ಮೇಲಿನ ಮಾತುಗಳಿಂದ ತಿಳಿಯಬಹುದು. ಈ ಮಾತುಗಳನ್ನು ಆಧಾರವಾಗಿಟ್ಟುಕೊಂಡೇ ಮುಂದೆ ಇಡೀ ಅಧ್ಯಾಯದಲ್ಲಿ ಮಾದೇಶ್ವರನ ಸ್ತ್ರೀಪರ ಕಾಳಜಿಯನ್ನು ವಿಶ್ಲೇಷಿಸಲಾಗಿದೆ. ಜೊತೆಗೆ ಮಾದೇಶ್ವರ ಕೂಡ ಇಲ್ಲಿ ಕೇವಲ ಹೇಳಿಕೆಯನ್ನು ನೀಡದೆ ಇಡೀ ಸಮುದಾಯದಲ್ಲಿ ಸ್ತ್ರೀ ಪರ ಕಾಳಜಿಯನ್ನು ಮೆರೆಯುತ್ತಾನೆ. ಸಂಕಮ್ಮ ಮಾದೇಶ್ವರನೆಂದು ತಿಳಿದ ತಕ್ಷಣ ನನ್ನ ಕಷ್ಟವನ್ನು ನೋಡಲು ಬಂದೆಯ, ಒಂದು ಕಾಳು ರಾಗಿಗೂ ಗತಿಯಿಲ್ಲದ, ಒಂದು ತಾಮ್ರದ ಕಾಸಿಗೂ ಗತಿ ಇಲ್ಲದ, ಈ ಪಾಪಿಗೇಡಿ ಸೊಪ್ಪಿನ ಗುಡಿಸಲಿಗೆ ಬರಬಹುದಾ ಮಾದೇವ ಎನ್ನುತ್ತಾಳೆ. ಆಗ ಮಾದೇವ ಘನ ಶರಣೆಯಾದ ಸಂಕಮ್ಮ ನೀನು ನನಗೆ ಮುತ್ತೈದೆ ಕೈಯ್ಯಿನ ಭಿಕ್ಷವನ್ನು ನನ್ನ ಮುತ್ತಿನ ಜೋಳಿಗೆಗೆ ನೀಡವ್ವ ಎಂದು ಕೇಳುತ್ತಾನೆ. ಆದರೆ ಹೊರಬರಲಾದ ಸ್ಥಿತಿಯಲ್ಲಿರುವ ಸಂಕಮ್ಮ ತನ್ನ ಮನೆಗೆ ಇನ್ನು ಒಂಬತ್ತು ತಿಂಗಳು ಕಳೆದ ಮೇಲೆ ಬನ್ನಿ, ನನ್ನ ಗಂಡ ಹೆಜ್ಜೇನು ಬೇಟೆಗೆ ಹೋಗಿದ್ದಾರೆ ಎನ್ನುತ್ತಾಳೆ ಆದರೆ, ಮಾದೇವ ಇವಳನ್ನು ಇನ್ನಷ್ಟು ಪರೀಕ್ಷಿಸಬೇಕೆಂದು ನಾನು ಸಾಲಕೇಳಲು ಬಂದಿಲ್ಲ. ಬಂದಾಗ ಇದ್ದರೆ ಭಿಕ್ಷೆ ಕೊಡು ಇಲ್ಲದಿದ್ದರೆ ಮುಂದೆ ಹೋಗು ಪರದೇಸಿ ಎಂದು ಹೇಳು ಎನ್ನುತ್ತಾನೆ. ಆಗ ಸಂಕಮ್ಮ ಅತ್ಯಂತ ನಮ್ರಳಾಗಿ ತನ್ನ ಗಂಡ ಹೆಜ್ಜೇನು ತುಪ್ಪ, ಕುರುಜೇನು ತುಪ್ಪ, ಕಾಡುಬಾಳೆಹಣ್ಣು, ಸೀಮೆಗೆಣಸು ಬಿದುರಕ್ಕಿ, ಮಾಗಾಳಿ ಬೇರು, ಬೆಟ್ಟದ ಗೆಣಸು ಇವುಗಳನ್ನು ತರುತ್ತಾನೆ ಆಗ ಅವುಗಳನ್ನು ನಿನಗೆ ಕೊಡುತ್ತೇನೆ ಎನ್ನುತ್ತಾಳೆ. ಅಂದರೆ ಬೇಟೆ ಹವ್ಯಾಸವಾಗದೆ ಅದರ ಬದುಕಿನ ಒಂದು ಪ್ರಧಾನ ಅಂಗವಾಗಿದೆ. ಆಹಾರ ವ್ಯವಸ್ಥೆಯಲ್ಲಿ ಬೇಟೆ ಪ್ರಮುಖವಾದುದಾಗಿದೆ. ಹೀಗೆ ಸಂಗ್ರಹಿಸಿದ ಪದಾರ್ಥಗಳನ್ನು ಹಂಚಿಕೊಂಡು ಜೀವನ ನಡೆಸುತ್ತಾರೆ. ಸೋಲಿಗರ ಜೀವನ ಕ್ರಮದ ವಿವರಣೆಗಳು ಎಲ್ಲ ಬುಡಕಟ್ಟಿನ ವಿವರಗಳೂ ಹಾಗಿವೆ. ಬಹುತೇಕ ಬುಡಕಟ್ಟಿನ ಜೀವನ ಕ್ರಮಗಳನ್ನು ಇದು ಪ್ರತಿನಿಧಿಸುತ್ತದೆ.

ಸಂಕಮ್ಮನು ಮಾದೇಶ್ವರನಿಗೆ ಹೇಳುವ ಸಾಲುಗಳನ್ನು ವಿಶೇಷವಾಗಿ ಗಮನಿಸಬೇಕು.

"ಅಯ್ಯೋ ಭಗವಂತ

ನನ್ನ ಗಂಡ ನೀಲಯ್ಯ ತಂದಂತ ಪದಾರ್ಥನೆಲ್ಲ

ಎರಡು ಭಾಗ ಮಾಡ್ತಿದ್ದಾರೆ
ನನಗೊಂದು ಭಾಗ ಕೊಟ್ಟು ನಮ್ಮೆಜಮಾನ್ರೊಂದು ಭಾಗ ತಕ್ಕತಿದ್ದಾರೆ
ನನಗೆ ಕೊಟ್ಟಂತ ಭಾಗ್ದಲ್ಲಿ ಆಸಲು ಮೀಸಲು ಮಾಡ್ದೆ
ಬಾಯಿಗೆ ಬಟ್ಟೆ ಕಟ್ಟಿಕೊಂಡು ಹೊಸಗಡ್ಗೆ ಒಳುಗೆ ತುಂಬಿ
ನೆಲೀನ್ಲೇಲಿ ಎತ್ತಿ ಮಡುಗ್ತೀನಿ ನನ್ನಯ್ಯ
ಹೆಜ್ಜೇನು ತುಪ್ಪ ತಂದು ನಿಮ್ಮ ಜೋಳಿಗೆ ತುಂಬ ನೀಡುವೆನು"[22]

ಇಲ್ಲಿ ಎರಡು ಪ್ರಮುಖ ಅಂಶಗಳನ್ನು ಕಾಣಬಹುದು. ಒಂದು ಪ್ರತಿ ಬುಡಕಟ್ಟು ಸಮುದಾಯಗಳಲ್ಲಿನ ಬೇಟೆ ಆಯಾ ಕುಟುಂಬ ಅಥವಾ ಬುಡಕಟ್ಟುಗಳಿಗೆ ಆಹಾರವನ್ನು ಒದಗಿಸುವ ಪ್ರಮುಖ ಮೂಲಗಳು. ಎರಡು ಈ ಮಾತನ್ನು ಸಂಕಮ್ಮ ಮಾದೇಶ್ವರನಿಗೆ ಹೇಳುತ್ತಿರುವುದರಿಂದ 'ತಾನು ಹಸಿದಿದ್ದರೂ ಮಾದೇಶ್ವರನಿಗೆ ನೀಡುತ್ತೇನೆ ಎನ್ನುವ ಮಾತಿನಲ್ಲಿ ಆಕೆ ಅನನ್ಯವಾದ ಭಕ್ತಿಯನ್ನು ಕಾಣುತ್ತೇವೆ, ಬಹುತೇಕವಾಗಿ ಇಂತಹ ಮಾತುಗಳಿಂದಲೇ ಸಂಕಮ್ಮ ಮಾದೇಶ್ವರನನ್ನು ಗೆಲ್ಲುತ್ತಾಳೆ. ಅಂದರೆ ಅವನ ಕರುಣೆ, ವರ ಇತ್ಯಾದಿಗಳನ್ನು ಪಡೆಯುತ್ತಾಳೆ. ತಾನು ಕಷ್ಟದಲ್ಲಿದ್ದರೂ ಮಾದೇಶ್ವರನ ಜೋಳಿಗೆಗೆ ಭಿಕ್ಷೆ ನೀಡುವುದಾಗಿ ಹೇಳುತ್ತಾಳೆ.'

ಮಾದೇಶ್ವರನಿಗೆ ಸನ್ನಿವೇಶದ ಸಂಪೂರ್ಣ ಅರಿವಿದ್ದರೂ ಕೂಡ ಭಿಕ್ಷೆ ನೀಡಲು ಆಗ್ರಹಿಸುತ್ತಾನೆ. ಸಂಕಮ್ಮ ತನ್ನನ್ನು ತಾನು ಹಳಿದುಕೊಂಡು 'ನೀವು ನಮ್ಮಪ್ಪನ ಮನೆಗಾದ್ರು ಹೋಗಿದ್ರೆ ಜೋಳ್ಗಿಗೆ ತುಂಬ ಮುತ್ತು, ರತ್ನ, ಚಿನ್ನ, ಬೆಳ್ಳಿ ಭಿಕ್ಷಾ ಕೊಡುತ್ತಿದ್ದರು. ಆದರೆ ನಾನೆಂತು ಭಿಕ್ಷೆ ಕೊಡಲಿ' ಎನ್ನುತ್ತಾಳೆ. ಇವಳ ಮಾತುಗಳಿಂದ ಅವಳ ಭಕ್ತಿಯನ್ನು ಮೆಚ್ಚುತ್ತಾನೆ. ತನ್ನ ಗಂಡ ಕೊಟ್ಟಿರುವ ಕಷ್ಟವನ್ನು ಇವಳು ಹೇಳುತ್ತಿಲ್ಲವಲ್ಲ. ಇವಳನ್ನು ವಿಚಾರಿಸಬೇಕೆಂದುಕೊಳ್ಳುತ್ತಾನೆ. ಆದರೆ ಇವಳು ಬಾಯಿ ಬಿಡುವುದಿಲ್ಲ. ನಾನು ಹೊರಗಡೆ ಉರಿಬಿಸಿಲಲ್ಲಿ ನಿಂತಿದ್ದೇನೆ, ನೀ ಒಳಗಡೆ ಇದ್ದೀಯ, ಹೊರಗಡೆ ಬಂದು ಮಾತನಾಡು ಎನ್ನುತ್ತಾನೆ ಮಾದೇವ, ಆಗ ಸಂಕಮ್ಮ ತನ್ನ ಕಷ್ಟವನ್ನು ಮಾದೇಶ್ವರನಿಗೆ ಹೇಳುತ್ತಾಳೆ. ಮಾದೇಶ್ವರ ಸಂಕಮ್ಮನ ಕಷ್ಟವನ್ನು ಒಂದೊಂದಾಗಿ ನಿವಾರಿಸುತ್ತಾನೆ. ಕಾಳಿಂಗ ಸರ್ಪವನ್ನು, ಮಂಡಲಗಳನ್ನು ಎಲ್ಲವನ್ನು ನಾಶಪಡಿಸಿ ಅವಳನ್ನು ಕಷ್ಟದಿಂದ ಪಾರು ಮಾಡುತ್ತಾನೆ.

ಸೊಪ್ಪಿನ ಗುಡಿಸಲು ಅರಮನೆ ಆಯಿತು. ಅರಮನೆ ಮೇಲೆ ಅಪ್ರಂಜಿ ಕಳಶ ಹೊಳೆಯಿತು. ಎಪ್ಪತ್ತೇಳು ಮಂಡಲಗಳು ಮಾಯವಾದವು. ಮಾದೇವ ಕೊಟ್ರೆ ಮನೆ ಹಿಡಿಸಲಾರದ ಭಾಗ್ಯವನ್ನು ಕೊಡುತ್ತಾನೆ. ಮಾದೇವ ಕೊಟ್ಟ ಭಾಗ್ಯ ಮನೆಮಠವೆಲ್ಲ ತುಂಬಿತಲ್ಲ ಎಂದು ಸಂಕಮ್ಮ ಸಂತೋಷಪಡುತ್ತಾಳೆ. ಆದರೆ ನನಗೆ ಸೀರೆಯನ್ನು ಕರುಣಿಸಲಿಲ್ಲ ಮಾದೇವ ಸೀರೆಯನ್ನು ಕೊಡು ಎನ್ನುತ್ತಾಳೆ. ಮಾದೇವ ಸೀರೆಯನ್ನು ಕೊಡುತ್ತಾನೆ. ಅತ್ಯಂತ ಕಷ್ಟದಲ್ಲಿದ್ದ ಹುಟ್ಟಿದ ನಿರ್ವಾಣದಲ್ಲಿದ್ದ ಸಂಕಮ್ಮನಿಗೆ ಮಾದೇವ ಸಂಪತ್ತನ್ನು ಮನೆಯ ತುಂಬ ದವಸ ಧಾನ್ಯವನ್ನು ನೀಡುತ್ತಾನೆ. ಹೀಗೆ ಸಂಪತ್ಭರಿತ... ಮನೆಯೊಡತಿಯಾದ ಸಂಕಮ್ಮ ಸೀರೆ ರವುಕೆಯನ್ನು ಹೀಗೆ ತೊಟ್ಟುಕೊಳ್ಳುತ್ತಾಳೆ.

"ಅವ್ವ ತಾನ ಜಲಕ ಮಾಡವ್ಳೆ
ಪಟ್ಟೆ ಸೀರೆಯ ಉಟ್ಟವುಳೆ
ಕೌಲಂಗಿ ರವುಕೆ ತೊಟ್ಟವುಳೆ
ಬಾಚಿ ಬೈತಲೆ ತಗುದವುಳೆ
ಎತ್ತಿ ಎಣಗಂಟ ಹೂಡವುಳೆ
ದುಂಡು ಮಲ್ಲಿಗೆ ತಗುದವುಳೆ
ಮಂಡೆಗೆ ತಾಯಿ ಮುಡುದವುಳೆ
ಈ ಬುತ್ತಿ ಪಟ್ಟ ಧರುಸವುಳೆ
ಕುಂಕುಮ್ದ ರೇಖೆ ಧರುಸವುಳೆ
ಮುತ್ತಿನ ಹಾರವ ಧರುಸವುಳೆ
ಪಟ್ಟೆ ಮಂಚದ ಮ್ಯಾಲೆ ಕೂತ್ಕೊಂಡು
ಥಟ್ಟನೆ ಮಾದೇವ್ನ ನೆನುದವ್ಳೆ"[23]

ನೀಲಯ್ಯ ಸಂಪೂರ್ಣ ವಡವೆ ವಸ್ತುಗಳನ್ನು ತೆಗೆದುಕೊಂಡು, ಅವಳಿಗೆ ಕೊಡಬಾರದ ಕೊಲೆ ಕಷ್ಟವನ್ನು ಕೊಟ್ಟು ಹೋಗಿರುತ್ತಾನೆ. ಕೈಕಾಲುಗಳನ್ನು ಕಟ್ಟಿ, ಎಕ್ಕದೆಲೆ, ತೇಗದೆಲೆಗಳನ್ನು ಉಡಿಸಿ ಹೋಗಿರುತ್ತಾನೆ. ಆದರೆ ಮಾದೇಶ್ವರನ ದಯೆಯಿಂದ ಮತ್ತು ತನ್ನ ಭಕ್ತಿಯ ಗಾಢತೆಯಿಂದ ಸಂಕಮ್ಮ ಸಕಲವನ್ನೂ ಪಡೆದಿದ್ದಾಳೆ. ಸಂತೋಷವಾಗಿ ಅವಳು ಮತ್ತೆ ಮುಕ್ತವಾದ ಸ್ವತಂತ್ರವಾದ ಜೀವನಕ್ಕೆ ತೆರೆದುಕೊಂಡಿದ್ದಾಳೆ. ಈಗಲೂ ಕೂಡ ಗಂಡನನ್ನು ಮರೆತಿಲ್ಲ. ಬಂಧ ಮುಕ್ತಗೊಂಡ ಸ್ನಾನವನ್ನು ಮಾಡಿ ಪಟ್ಟೆ ಸೀರೆಯನ್ನು ಉಟ್ಟು, ಉತ್ತಮ ರವುಕೆ ತೊಟ್ಟು ಮಲ್ಲಿಗೆ ಹೂವನ್ನು ಮುಡಿದು, ವಿಭೂತಿಯನ್ನು ಧರಿಸಿ ಕುಂಕುಮವನ್ನು ಇಟ್ಟುಕೊಂಡಿದ್ದಾಳೆ. ಮುತ್ತಿನ ಹಾರವನ್ನು ಧರಿಸಿದ್ದಾಳೆ. ಈ ಎಲ್ಲ ಸಂಭ್ರಮದ ನಡುವೆ ಇದನ್ನು ಕೊಟ್ಟ ತನ್ನ ಸಂತೋಷಕ್ಕೆ ಕಾರಣರಾದ ಮಾದೇಶ್ವರನನ್ನು ಭಕ್ತಿಯಿಂದ ಸ್ಮರಿಸುತ್ತಾಳೆ. ಈ ಕಾರಣಕ್ಕಾಗಿಯೇ ಅಂದರೆ ಸಂಭ್ರಮದಲ್ಲೂ ಕೂಡ ಮಾದೇಶ್ವರನ ಸ್ಮರಣೆಯನ್ನು ಬಿಡದಂತಹ ಭಕ್ತಿ ಉಳ್ಳವಳಾಗಿರುವುದರಿಂದಲೇ ಮಾದೇಶ್ವರ ಇವಳನ್ನು ತನ್ನ ಭಕ್ತೆಯಾಗಿ ಸ್ವೀಕರಿಸುತ್ತಾನೆ.

ಸಂಕಮ್ಮನಿಗೆ ಭಾಗ್ಯವನ್ನು ಕೊಟ್ಟ ಮಹದೇಶ್ವರ ಅವಳ ಭಕ್ತಿಯನ್ನು ಮತ್ತೊಮ್ಮೆ ಪರೀಕ್ಷಿಸಲು ಬಯಸುತ್ತಾನೆ. ಮತ್ತೆ ಅವಳ ಮನೆ ಮುಂದೆ ನಿಂತು ಭಿಕ್ಷವನ್ನು ಸಾರುತ್ತಾನೆ. ಆಗ ಥಟ್ಟನೆ ಸಂಕಮ್ಮ ಮಂಚವ ಬಿಟ್ಟು ಇಳಿಯುತ್ತಾಳೆ ತನ್ನ ದೇವರಾದ ಮಾದೇವನೇ ಬಂದಿರುವುದಾಗಿ ತಿಳಿಯುತ್ತಾಳೆ. ಮಾದೇವನಿಗೆ ಭಿಕ್ಷೆ ಕೊಡಲು ಬೆತ್ತದ ಮರವನ್ನು ತೆಗೆದುಕೊಂಡು ಅಕ್ಕಿ, ಬೇಳೆ, ಹತ್ತು ಎಲೆ ಐದು ಅಡಿಕೆ, ಕಡ್ಡಿಕರ್ಪೂರ ತೆಗೆದು ಮರದಲ್ಲಿಟ್ಟುಕೊಂಡು ಮಂಗಳಾರತಿ ಮಾಡಿದ್ದಾಳೆ. ಅವಳ ಹೊಸ್ತಿಲನ್ನು ದಾಟದೆ ಒಳಗೆ ನಿಂತೇ ಭಿಕ್ಷೆ ನೀಡಲು ಹೋಗುತ್ತಾಳೆ. ಆಗ ಮಾದೇಶ್ವರ ಅವಳಿಗೆ ಬುದ್ಧಿಯನ್ನು ಹೇಳುತ್ತಾನೆ. ಜೊತೆಗೆ ಮುಂದೆ ಬರುವ ಕಲಿಯುಗದಲ್ಲಿ ಸ್ತ್ರೀ ಸಮುದಾಯಕ್ಕೆ ನೀನು ಬುದ್ಧಿಯನ್ನು ಹೇಳಬೇಕು ಎಂದು ಹೇಳುತ್ತಾನೆ.

"ನೋಡಮ್ಮ ಕತ್ತಲ್ಲಿ ಮಾಂಗಲ್ಯವಿಲ್ಲದೆ
ಪತಿಗೆ ನೀರ್ ಕೊಡಬಾರ್ದು ನನಕಂದ
ಬಾಯ್ನಲ್ಲಿ ತಾಂಬೂಲ ಒತ್ತೂರುಸ್ಕೊಂಡು
ಪತೀಗೆ ಊಟಕ್ಕೆರೆಯಬಾರ್ದು ನನಕಂದ
ಮುತ್ತೈದೇರ್ ಸ್ಥಾನಕ್ಕೆ ಭಂಗುವಾಯ್ತದೆ
ನಮ್ಮಂತ ಗುಡ್ಡಗೂರಮ ಬಂದ್ರೆ
ಒಳಬಾಗ್ಲಲ್ಲಿ ನಿಂತ್ಕೊಂಡು ಭಿಕ್ಷಾ ಕೊಡಬಾರದ್ದು ನನ ಮಗಳೆ"[24]

ಮಾದೇಶ್ವರ ಸಂಕಮ್ಮನ ಕಷ್ಟವನ್ನು ಕಳೆಯುವುದರ ಜೊತೆಗೆ ಅವಳಿಗೆ ಸಂಸಾರದ ಬಗೆಗಿನ, ಜೀವನ ವಿಧಾನದ ಬಗೆಗಿನ ನಿಯಮಗಳನ್ನು ಹೇಳುತ್ತಾನೆ. ವಿನಯ, ಭಕ್ತಿ ಇವುಗಳು ನಮ್ಮ ಜೀವನದಲ್ಲಿ ಮುಖ್ಯವಾಗಬೇಕು. ಇವುಗಳಿಂದಲೇ ನಮಗೆ ಶ್ರೇಯಸ್ಸು ಎನ್ನುತ್ತಾನೆ. ಪತಿಯನ್ನು ನೋಡಿಕೊಳ್ಳುವ ರೀತಿ, ಭಿಕ್ಷೆ ನೀಡುವ ಪದ್ಧತಿ ಜೊತೆಗೆ ಪತಿವ್ರತ ಧರ್ಮ ಇವುಗಳನ್ನು ತಿಳಿಸಿಕೊಡುತ್ತಾನೆ. ಗಂಡ ಎಷ್ಟೇ ಕಷ್ಟಕೊಟ್ಟಿದ್ದರು ಅವನೊಂದಿಗಿನ ಸಂಬಂಧವನ್ನು ಕಡಿದುಕೊಳ್ಳಬಾರದು. ಇದರಿಂದ ದ್ವೇಷ ಹೆಚ್ಚುತ್ತದೆಯೇ ಹೊರತು ಸಂಸಾರ ಸುಖವಾಗುವುದಿಲ್ಲ. ಇದನ್ನು ಸಂಕಮ್ಮನೂ ಅನುಸರಿಸುತ್ತಾಳೆ. ಮಾದೇಶ್ವರನ ಇಂಗಿತವೂ ಇದೇ ಆಗಿರುತ್ತದೆ. ಸ್ತ್ರೀ ಪರ ನಿಲುವನ್ನು ಹೊಂದಿದ್ದರೂ ಕೂಡ ಮಾದೇಶ್ವರ ಅದು ಸಂಸಾರದಲ್ಲಿದ್ದುಕೊಂಡೇ ಸ್ತ್ರೀ ಉನ್ನತ ಏಳಿಗೆಯನ್ನು ಸಾಧಿಸಬಹುದು ಎನ್ನುವುದರ ಕಡೆಗಿದೆ. ಹೊಸ್ತಿಲನ್ನು ದಾಟಿ ಬಂದು ಭಿಕ್ಷೆ ನೀಡಬೇಕೆಂದು ಮಾದೇಶ್ವರ ಕೇಳುತ್ತಾನೆ. ಹಾಗೆಯೇ ಏಳೇಳು ಬಾಗಿಲನ್ನು ದಾಟಿ ಹೊರಗಡೆ ಬಂದು ಭಿಕ್ಷೆಯನ್ನು ಕೊಡಲು ಸಂಕಮ್ಮ ಹೋಗುತ್ತಾಳೆ. ಆದರೆ ಇಲ್ಲಿಯವರೆಗೂ ಸುಮ್ಮನಿದ್ದು ಭಿಕ್ಷೆಯನ್ನು ಕೇಳಿದ ಮಾದೇಶ್ವರ ಈಗ ಅವಳ ತಂದೆ-ತಾಯಿ, ಅಣ್ಣ-ತಮ್ಮ ಅಕ್ಕ-ತಂಗಿ, ಇದ್ದಾರ ಗಂಡು ಮಕ್ಕಳು, ಹೆಣ್ಣು ಮಕ್ಕಳು ಇದ್ದಾರ ಎಂದು ಪ್ರಶ್ನಿಸುತ್ತಾರೆ. ಇಲ್ಲಿಯವರೆಗೂ ಮಾದೇಶ್ವರನು ಕೊಟ್ಟ ಸಂಪತ್ತಿನಿಂದ ನೆಮ್ಮದಿಯಿಂದಿದ್ದ ಸಂಕಮ್ಮ ಅತ್ಯಂತ ಅವಮಾನಿತಳಾಗಿ ಶೋಕವನ್ನು ಅನುಭವಿಸುತ್ತಾಳೆ. 'ನನಗೆ ಮಕ್ಕಾಳ ಫಲವೇ ಮೊದಲಿಲ್ಲ ಯಾರ ಮಕ್ಕಳನ್ನು ಕೂಗಿ ಕರೆಯಲಿ ಎನ್ನುತ್ತಾಳೆ' ಮತ್ತೊಂದು ನಿಟ್ಟಿನಿಂದ ನೋಡಿದಾಗ ಮಾದೇಶ್ವರ ಬಂದಿರುವುದೇ ಸಂಕಮ್ಮನ ಸಂಕಟವನ್ನು ಕಳೆಯಲು, ತನ್ನ ವಾರಗಿತ್ತಿಯರಿಂದ ಬಂಜೆ ಎಂದು ಬೈಸಿಕೊಂಡು ತನ್ನ ಗಂಡನಿಂದಲೂ ಬೈಸಿಕೊಂಡು ಅವಮಾನಿತಳಾದ ಒಂದು ಹೆಣ್ಣಿಗೆ ಸಂಪತ್ತು ಮತ್ತು ಮಕ್ಕಳನ್ನು ಕೊಟ್ಟು ಸಂತುಷ್ಟಿಗೊಳಿಸಲೆಂದೇ ಮಾದೇಶ್ವರ ಈಗ ಬಂದಿರುವುದು, ಮಾದೇಶ್ವರ ಬಂಜೆ ಕೈಯಿನ ಭಿಕ್ಷವನ್ನು ಸ್ವೀಕರಿಸುವುದಿಲ್ಲ ಎನ್ನುತ್ತಾನೆ. ಆಗ ಸಂಕಮ್ಮ ನೀನೇ ನನಗೆ ಮಕ್ಕಳ ಫಲವನ್ನು ಕೊಡಬೇಕು ಎಲ್ಲರೂ ನನ್ನ ಬಂಜೆ ಅಂದರು. ಆದರೆ ದೇವರಾದ ನೀವೇ ಹೀಗೆ ಅನ್ನಬಹುದ? ನನಗೆ ಮಕ್ಕಳ ಫಲವನ್ನು ಕೊಡಿ ಎಂದು ಅಂಗಲಾಚುತ್ತಾಳೆ. ಮಕ್ಕಳ ಫಲವನ್ನು ಕೊಡದಿದ್ದರೆ ನೀವು ನನಗೆ ಕೊಟ್ಟಿರುವ ಅರಮನೆಯೇ ಮೊದಲಾದ ಸಂಪತ್ತನ್ನು ಹಿಂಪಡೆದು ಮೊದಲು ತನ್ನ ಗಂಡ ತನಗೆ ಯಾವ ರೀತಿ ಕಷ್ಟ ಕೊಟ್ಟಿದ್ದನೋ ಅದೇ ರೀತಿ ಕಷ್ಟವನ್ನು ಕೊಟ್ಟುಹೋಗು ಎನ್ನುತ್ತಾಳೆ.

ಮಾದೇಶ್ವರನಿಗೆ ಮಕ್ಕಳ ಫಲವನ್ನು ಕೊಡುವಂತೆ ಸಂಕಮ್ಮ ಅಂಗಲಾಚುತ್ತಾಳೆ. ಆದರೆ ಮಾದೇಶ್ವರ

ಷರತ್ತು ಬದ್ಧ ಮಾತಿಗೆ ಒಪ್ಪುವುದಾದರೆ ತಾನು ಮಕ್ಕಳ ಫಲವನ್ನು ಕೊಡುತ್ತೇನೆಂದು ಹೇಳುತ್ತಾನೆ. ನನಗೆ ಏನಾದರೂ ಹರಕೆ ಕೊಡುವುದಾದರೆ ಮಕ್ಕಳ ಫಲವನ್ನು ಕೊಡುವುದಾಗಿ ಹೇಳುತ್ತಾನೆ. ಸಂಕಮ್ಮ ಕೂಡ ಆ ಮಾತಿಗೆ ಒಪ್ಪುತ್ತಾಳೆ. ಜಾತ್ರೆಗೆ ಬರುವವರಿಗೆಲ್ಲ ಅರವಟಿಗೆ, ಕಟ್ಟಿಗೆ, ಅನ್ನ, ನೀರು ಕೊಡುತ್ತೇನೆಂದು ಹೇಳುತ್ತಾಳೆ. ಆದರೆ ಅದನ್ನು ಮಾಡುವ ಭಕ್ತರನ್ನು ಹೊಂದಿರುವುದಾಗಿ ಮಾದೇಶ್ವರ ಹೇಳುತ್ತಾನೆ. ಮತ್ತೆ ಮತ್ತೆ ಮಾದೇಶ್ವರ ಬಾಗಿಲಲ್ಲೆ ಭಿಕ್ಷೆಯನ್ನು ಸಾರುತ್ತಾ ನಿಂತಿದ್ದಾನೆ. ಸಂಕಮ್ಮ ಮಾದೇಶ್ವರನಿಗೆ ಗುಡಿಕಟ್ಟಿಸುತ್ತೇನೆ ಎನ್ನುತ್ತಾಳೆ. ಅದನ್ನು ಕಟ್ಟಿರುವ ಭಕ್ತರನ್ನು ಪಡೆದಿರುವುದಾಗಿ ಮಾದೇಶ್ವರ ಹೇಳುತ್ತಾನೆ.

ಬಂಜೆ ಎನ್ನುವ ಹೀಯಾಳಿಕೆಯಿಂದ ಹೊರಬರಲು ಮಾದೇಶ್ವರನಿಗೆ ಅನೇಕ ಹರಕೆಗಳನ್ನು ಮಾಡುತ್ತಾಳೆ, ಏಕೆಂದರೆ ಅವಳಿಗೆ ಮಕ್ಕಳ ಫಲ ಬೇಕಾಗಿದೆ. ಲೋಕದಲ್ಲಿ ಎಲ್ಲರಿಂದಲೂ ಓರಗಿತ್ತಿಯರಿಂದ ಹಿಡಿದು ಗಂಡನಾದ ನೀಲಯ್ಯನನ್ನು ಒಳಗೊಂಡಂತೆ ಮಾದೇಶ್ವರನೂ ಕೂಡ ಅವಳನ್ನು ಬಂಜೆ ಎಂದು ಕರೆಯುತ್ತಾನೆ. ಇದರಿಂದ ಅತ್ಯಂತ ತೀವ್ರವಾದ ನೋವಿಗೆ ಸಂಕಮ್ಮ ಗುರಿಯಾಗುತ್ತಾಳೆ. ಹಾಗಾಗಿ ಯಾವುದೇ ಹರಕೆ ಎಷ್ಟೇ ಕಷ್ಟದ ಹರಕೆಯಾಗಲಿ ಮಾದೇಶ್ವರನಿಗೆ ಕೊಟ್ಟು ಮಕ್ಕಳ ಫಲ ಪಡೆಯಲು ಬಯಸುತ್ತಾಳೆ. ಚಿನ್ನದ ಕೊಳಗವನ್ನು ಮಾಡಿಸುತ್ತೇನೆ, ಬೆಳ್ಳಿಯ ಬಸವನನ್ನು ಗೆಯ್ಸುತ್ತೇನೆ, ಮಜ್ಜನದ ಬಾವಿ ತೆಗೆಸುತ್ತೇನೆ, ವರ್ಷಕ್ಕೊಂದು ಸಲ ಯಾಲಕ್ಕಿ ಫಲಾರ ಮಾಡಿಕೊಂಡು ಬೆಟ್ಟಕ್ಕೆ ಬರುತ್ತೇನೆ, ಚಿನ್ನ ಬೆಳ್ಳಿಯಲ್ಲಿ ಹುಲಿವಾಹನವನ್ನು ಮಾಡಿಸುತ್ತೇನೆ. ಕೌದಳ್ಳಿಯಿಂದ ಹಿಡಿದು ಕಾಳುಬೆಟ್ಟದವರೆಗೆ ರಸ್ತೆ ಮಾಡಿಸುತ್ತೇನೆ. ನಿನ್ನ ಬೆಟ್ಟಕ್ಕೆ ಬರುವ ಗಂಡುಪರಿಸೆ ಹೆಣ್ಣು ಪರಿಸೆಗಳಿಗೆ ಹಾಲು ಹಣ್ಣು ದಾನವಾಗಿ ನೀಡುತ್ತೇನೆ ಎಂದು ಸಂಕಮ್ಮ ಮಾದೇಶ್ವರನಿಗೆ ಹರಕೆ ಮಾಡಿಕೊಳ್ಳುತ್ತಾಳೆ. ಆದರೆ ಮಾದೇಶ್ವರ ಈ ಯಾವೊಂದು ಹರಕೆಗೂ ಕೂಡ ಒಪ್ಪುವುದಿಲ್ಲ. ಸಂಕಮ್ಮನ ಅವಮಾನ, ಅಸಹಾಯಕತೆ, ದುಃಖ ಮುಗಿಲು ಮುಟ್ಟುತ್ತದೆ. ಕೊನೆಗೆ ನೀನು ನನಗೆ ಮಕ್ಕಳ ಫಲವನ್ನು ಕೊಟ್ಟಿದ್ದಾದರೆ ನೀನು ಕೊಟ್ಟಂತಹ ಮಕ್ಕಳನ್ನು ನಿನ್ನ ಮುತ್ತಿನ ಜೋಳಿಗೆಗೆ ಭಿಕ್ಷೆ ನೀಡುವುದಾಗಿ ಹೇಳುತ್ತಾಳೆ. ಆಗ ಮಾದೇಶ್ವರನ ಅಪೇಕ್ಷೆಯೇ ಶಿಶು ಮಕ್ಕಳನ್ನು ಪಡೆಯುವುದಾದ್ದರಿಂದ ಅದಕ್ಕೆ ಒಪ್ಪಿ ಮಕ್ಕಳನ್ನು ನೀಡಲು ಸಮ್ಮತಿಸುತ್ತಾನೆ.

ಮಾದೇಶ್ವರನಿಗೆ ಸಂಕಮ್ಮ ಹರಕೆ ಮಾಡಿಕೊಳ್ಳುವ ವಿಷಯಗಳನ್ನು ನೋಡಿದರೆ ಒಂದು ಹೆಣ್ಣಿನ ಕೈಯ್ಯಲ್ಲಿ ಇಷ್ಟೊಂದು ಮಾಡಲು ಶಕ್ತಿ ಇದೆಯೋ ಇಲ್ಲವೋ, ಆದರೆ ಆ ಹರಕೆಯನ್ನು ಹೇಗಾದರೂ ಮಾಡಿ ತೀರಿಸುತ್ತಾಳೆ. ಪೂರೈಸುತ್ತಾಳೆ. ಆದರೆ ಈ ಲೋಕನಿಂದೆಯನ್ನು ಸಹಿಸಲಾರಳು. ಒಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾಳೆ. 'ಹೀಗೆ ಹುಟ್ಟಿ ಹಾಗೆ ಸತ್ತರೂ ಚಿಂತೆಯಿಲ್ಲ, ಕುರುಡನಾದರೂ ಪರವಾಗಿಲ್ಲ. ಕುಂಟನಾಗಲಿ ಕಿವುಡನಾಗಲಿ ನನ್ನ ಹೊಟ್ಟೆಯಲ್ಲಿ ಒಂದು ಕೊನೆಯನ್ನು ನೀಡು' ಎನ್ನುತ್ತಾಳೆ. ಅಂದಗೆ ಅವಳ ಸಹವರ್ತಿಗಳು ಒಡನಾಡಿಗಳು ಅದೆಷ್ಟು ಮನನೋಯಿಸಿದ್ದಾರೆ ಎಂಬುದು ತಿಳಿಯುತ್ತದೆ. ಸಂಕಮ್ಮನಿಗೆ ವಿಶೇಷ ಪ್ರಸಾದವನ್ನು ಕೊಟ್ಟು ಮಾದೇಶ್ವರ ಮೊದಲು ಹುಟ್ಟಿದ ಮಕ್ಕಳನ್ನು ಕಾರಯ್ಯ, ಬಿಲ್ಲಯ್ಯ ಎಂದು ಕರೆಯಬೇಕು. ಮೂರನೆಯದಾಗಿ ಹುಟ್ಟಿದ ಮಗುವನ್ನು ನೀನು ಇಟ್ಟುಕೊಳ್ಳಬಹುದು ಎನ್ನುತ್ತಾನೆ.

ನನ್ನ ವರದಿಂದ ಮಕ್ಕಳು ಬೆನ್ನ ಮಚ್ಚೆಯಲ್ಲಿ ಹುಟ್ಟುತ್ತಾರೆ. ಮೊದಲು ಹುಟ್ಟಿದ ಕಾರಯ್ಯ ಬಿಲ್ಲಯ್ಯ

ಅನ್ನುವವರು ನನ್ನ ಮಕ್ಕಳು. ನೀನು ಅವರನ್ನು ಮುತ್ತಿಕ್ಕಬಾರದು. ಮುದ್ದಾಡಬಾರದು ಎಂಜಲು ಮಾಡಬಾರದು ಎಂದು ತಾಕೀತು ಮಾಡುತ್ತಾನೆ. ಕೊನೆಯಲ್ಲಿ ಹುಟ್ಟಿದ ಮಗುವನ್ನು ಅಲ್ಲಯ್ಯ ಎಂದು ಕರೆದುಕೊ ಎನ್ನುತ್ತಾನೆ. ಸಂಕಮ್ಮ ಮುಂದೆ ತನ್ನ ಗಂಡ ನೀಲಯ್ಯನಿಂದ ಸಂಭವಿಸಬಹುದಾದ ಅನುಮಾನಾಧಾರಿತ ಅನಾಹುತಗಳನ್ನು ಮಾದೇವನಿಗೆ ಹೇಳುತ್ತಾಳೆ. ಮಾದೇಶ್ವರ ತಾನು ನಿನ್ನ ಮನೆಯ ಗೋಡೆಯ ಮೇಲೆ ಬಿಳಿಪಲ್ಲಿಯಾಗಿ ಒರಗಿರುವುದಾಗಿ ಮತ್ತು ಯಾವುದೇ ಕಾರಣಕ್ಕೂ ನಿನ್ನನ್ನು ಕಷ್ಟಕ್ಕೆ ದೂಡಲು ಬಿಡುವುದಿಲ್ಲ, ನಿನ್ನ ಕಷ್ಟವನ್ನು ಕಳೆಯುತ್ತೇನೆ ಎನ್ನುತ್ತಾನೆ.

ಗರ್ಭಿಣಿಯಾದ ಸಂಕಮ್ಮ ತಾನು ಬಯಸಿದ್ದನ್ನೆಲ್ಲ ಪಡೆದು ಸಂತೋಷದಿಂದ ಇದ್ದಾಳೆ. ತನ್ನ ಗಂಡನ ಬರುವಿಕೆಗಾಗಿ ಇದಿರು ನೋಡುತ್ತಿದ್ದಾಳೆ. ಇಂತಹ ಸಮಯದಲ್ಲಿ ಅತ್ತ ಕಡೆ ನೀಲಯ್ಯನಿಗೆ ಬೇಟೆಯ ಮೇಲೆ ಆಸಕ್ತಿ ಕಡಿಮೆಯಾಗಿ ಸತಿಯ ನೆನಪು ಗಾಢವಾಗತೊಡಗಿತು. ಕುಲದವರ ಅಪ್ಪಣೆಯನ್ನು ಪಡೆದು ಹಿಂತಿರುಗುತ್ತಾನೆ. ಬಂದ ಕೂಡಲೆ ಅವನಿಗೆ ಆಶ್ಚರ್ಯ ಅನುಮಾನಗಳು ಬರುತ್ತವೆ. ತಾನು ಮೊದಲೆ ಊಹಿಸಿದಂತೆ ಏನೋ ಅನಾಹುತವಾಗಿದೆ ಎಂದು ಅವನು ತಿಳಿಯುತ್ತಾನೆ. ಜೊತೆಗೆ ತನ್ನ ಹೆಂಡತಿ ಗರ್ಭಿಣಿಯಾಗಿರುವುದನ್ನು ಶಂಕಿಸುತ್ತಾನೆ. ಪಿ.ಕೆ. ರಾಜಶೇಖರ ಅವರು ಹೀಗೆ ಅಭಿಪ್ರಾಯ ಪಡುತ್ತಾರೆ. "ಸಂಕಮ್ಮ ಮಾದೇಶ್ವರನ ಮಾಯೆಯಿಂದ ತನ್ನ ಬಂಜೆತನವನ್ನು ನೀಗಿಕೊಂಡರೂ ಅವಳ ಗಂಡ ನೀಲಯ್ಯ ಅವಳ ಶೀಲವನ್ನು ಶಂಕಿಸುವ ಸಂದರ್ಭ ಅತ್ಯಂತ ಸಹಜವಾಗಿರುವುದಲ್ಲದೆ ಲೌಕಿಕ ಸತ್ಯದೆಡೆಗೆ ಮುಖಮಾಡಿದೆ. ಮಾತ್ರವಲ್ಲ ಅತ್ಯಂತ ಮಾರ್ಮಿಕವಾಗಿದ್ದು ಅವನ ವಾದ ವೈಜ್ಞಾನಿಕವಾಗಿರುವುದರಿಂದ ಅವನನ್ನು ವಿನಾ ಕಾರಣ ದೂರಲಾಗುವುದಿಲ್ಲ."[25]

ಈ ಮಾತನ್ನು ನಾವು ಒಪ್ಪಬಹುದು. ಮಾದೇಶ್ವರನ ಮಾಯೆ ಎಂದು ನೀಲಯ್ಯನಿಗೆ ತಿಳಿಯದು, ಆದ್ದರಿಂದ ಸಂಕಮ್ಮನನ್ನು (ಗೊಂಬೆ) ಕತ್ತರಿಸಿ ತಾನು ಆತ್ಮಹತ್ಯೆ ಮಾಡಿಕೊಳ್ಳಲು ಮುಂದಾಗುತ್ತಾನೆ. ಆಗ ಸಂಕಮ್ಮ ಬಂದು ತಡೆಯುತ್ತಾಳೆ. ಮತ್ತೆ ಅವಳನ್ನು ಕೊಲೆ ಮಾಡಲು ಮುಂದಾಗುತ್ತಾನೆ. ಆಗ ಕತ್ತಿ ಬಾಳೆ ಎಲೆ ಆಗುತ್ತದೆ, ನೀಲಯ್ಯ ಸಂಕಮ್ಮನನ್ನು ಪ್ರಶ್ನಿಸುತ್ತಾನೆ.

"ಎಂತೆ - ಯಕ್ಷಿಣಿಗಾರ್ನ ಮಡುಗಿದ್ದಾಯ್
ಎಂತೆ - ಮಾಟಗಾರ್ನ ಮಡುಗಿದ್ದಾಯ್
ಎಂತೆ - ಗಾಡುಗ ಇದ್ಯೇವ್ನ ಮಡುಗಿದ್ದೀಯೇ
ಎಂತೆ - ಮೋಡಿ ಎತ್ತೋನ್ನ ಮಡುಗಿದ್ದಾಯ್
ನಿಜುವಾದ ಮಾತ ಹೇಳಿಯೋ - ನಿನ್ನ
ಪ್ರಾಣಕ್ಕೆ ಬುದ್ಧಿ ಹೇಳಿಯೋ"[26]

ಹೀಗೆ ಸಂಕಮ್ಮನನ್ನು ಬಿಟ್ಟು ಹೋಗುವಾಗ ಯಾವ ಅನುಮಾನವನ್ನು ಹೊಂದಿದ್ದನೋ ಈಗ ಅದೇ ನಿಜವಾಗಿದೆ. ಹಾಗಾಗಿಯೇ ಇವನೂ ಕೂಡ ಮಂತ್ರ ತಂತ್ರಗಾರನಾಗಿರುವು ದರಿಂದ ಈ ರೀತಿಯ

ಸಾಧ್ಯತೆಗಳನ್ನು ಅವನು ನಂಬುತ್ತಾನೆ, ಸಂಕಮ್ಮ ನೀವು ಕೊಟ್ಟ ಕಷ್ಟದಲ್ಲಿಯೇ ನಾನಿದ್ದೆ. ಆದರೆ ನಮ್ಮಪ್ಪನ ಮನೆದೇವರಾದ ಮಾದೇವ ಬಂದು ನನ್ನ ಕಷ್ಟವನ್ನು ನೋಡಲಾರದೆ ಇದನ್ನು ನೀಡಿದ. ಅವನ ಕಾಲನ್ನು ಹಿಡಿದು ಬೇಡಿದ್ದರಿಂದಲೇ ಅವನು ಮಕ್ಕಳ ಫಲವನ್ನು ನೀಡಿದ ಮತ್ತೇನು ತಪ್ಪಾಗಿಲ್ಲ ಎಂದು ಹೇಳುತ್ತಾಳೆ. ಇದನ್ನು ನಂಬದೆ ತಾನು ನಿನಗೆ ನೀಡುವ ಪರೀಕ್ಷೆಯಲ್ಲಿ ಗೆದ್ದರೆ ನಿನ್ನ ದೇವರಾದ ಮಾದೇವನನ್ನು ನಂಬುವುದಾಗಿ ಹೇಳುತ್ತಾನೆ. ಉಕ್ಕಿನ ಒನಕೆಯನ್ನು ಸಿಗಿದು ಅದರಲ್ಲಿನಾರು ತೆಗೆದರೆ ನಂಬುವುದಾಗಿ ಹೇಳುತ್ತಾನೆ. ಇದೇ ರೀತಿ ಅತಿ ಕಠೋರವಾದ ಹತ್ತು ಬಗೆಯ ದಿವ್ಯಗಳನ್ನು ಒಡ್ಡುತ್ತಾನೆ. ಮಾದೇಶ್ವರನ ಕರುಣೆಯಿಂದ ಸಂಕಮ್ಮ ಅವೆಲ್ಲವುಗಳನ್ನು ಜಯಿಸುತ್ತಾಳೆ. ಕೊನೆಗೆ ನೀಲಯ್ಯನು ಮಾದೇವನ ಸತ್ಯವನ್ನು ಒಪ್ಪುತ್ತಾನೆ. ನಂತರದಲ್ಲಿ ಮಾದೇಶ್ವರನಿಗೆ ಮಾತುಕೊಟ್ಟಂತೆ ಎರಡು ಮಕ್ಕಳನ್ನು ಸಂಕಮ್ಮ ಮಾದೇಶ್ವರನ ಮುತ್ತಿನ ಜೋಳಿಗೆಗೆ ದಾನವಾಗಿ ನೀಡುತ್ತಾಳೆ.

ಮಾದೇಶ್ವರ ನೀಲಯ್ಯನಿಗೆ ತನ್ನ ಮಹಿಮೆಯನ್ನು ಶಕ್ತಿಯನ್ನು ತಿಳಿಸುವುದರ ಜೊತೆಗೆ, ಹೆಂಡತಿಯ ಅರ್ಥಾತ್ ಸ್ತ್ರೀಯ ಬಗೆಗೆ ಗೌರವ, ಆದರ ಭಾವ, ಸಮಾನತೆಯ ಭಾವ, ಸ್ತ್ರೀಯ ಮಹತ್ವ ಇವುಗಳನ್ನು ತಿಳಿಸುತ್ತಾನೆ. ಸಂಕಮ್ಮನ ಬಗೆಗೆ ಮಾದೇಶ್ವರ ತಳೆದ ನಿಲುವು ಇಡೀ ಸ್ತ್ರೀ ಸಮುದಾಯದ ಬಗೆಗೆ ತಳೆದ ನಿಲುವಾಗಿದೆ. ಏಕೆಂದರೆ ಪುರುಷಪ್ರಧಾನವಾದ, ಸ್ತ್ರೀ ಶೋಷಣೆ ಮಾಡುತ್ತಿರುವ, ಹೆಣ್ಣು ಗಂಡಿನ ಸ್ವತ್ತೆಂದು ತಿಳಿದಿರುವ ಸಮುದಾಯದಲ್ಲಿ ಸಂಸ್ಕೃತಿಯಲ್ಲಿ ಮಾದೇಶ್ವರ ಇಡೀ ಸ್ತ್ರೀ ಸಮುದಾಯದ ಬಗೆಗೆ ತಳೆದ ನಿಲುವು ಗಮನೀಯವಾದದ್ದು. ಇದರಿಂದ ನೀಲಯ್ಯನೇ ಮೊದಲಾದ ಪುರುಷ ಮನಸ್ಸುಗಳಿಗೆ ಹೆಣ್ಣನ್ನು ನೋಡುವ ದೃಷ್ಟಿಕೋನವನ್ನು ಬದಲಾಯಿಸುತ್ತಾನೆ. ಇಡೀ ಅಧ್ಯಾಯದಲ್ಲಿ ಮಾದೇಶ್ವರ ಸ್ತ್ರೀ ಪರ ನಿಲುವನ್ನು ತಳೆಯುತ್ತಾನೆ. ಈ ಮೊದಲೇ ಹೇಳಿದಂತೆ ಹೆಣ್ಣು ಅಂದರೆ ಹೆತ್ತ ತಾಯಿ ಮಾಡಿಕೊಂಡು ಸ್ತ್ರೀಯರಿಗೆ ಸೋದರನಾಗಿರುತ್ತೇನೆ ಎನ್ನುತ್ತಾನೆ.

ಡಾ. ಬೋರೇಗೌಡ ಚಿಕ್ಕಮರಳಿ ಅವರ ಅಭಿಪ್ರಾಯ ಉಲ್ಲೇಖಾರ್ಹವಾದದ್ದು. "ಕಾವ್ಯ ಬೆಳೆಯುತ್ತಾ ಹೋದಂತೆಲ್ಲ ಸ್ತ್ರೀಯರ ವಿಷಯದಲ್ಲಿ ಅದು ವ್ಯಕ್ತಪಡಿಸುವ ಅಭಿಪ್ರಾಯಗಳು ಇಲ್ಲಿನ ಸಾಮಾಜಿಕ ಚಿಂತನೆಯ ಮತ್ತೊಂದು ಮುಖ, ಸ್ತ್ರೀ ವಿಷಯದಲ್ಲಿ ನಕಾರಾತ್ಮಕ ನಿಲುವಿನಿಂದ ಹೊರಡುವ ಇಲ್ಲಿನ ವಿಚಾರಗಳು ಕೊನೆಗೆ ಒಂದು ಆರೋಗ್ಯಕರವಾದ ನೆಲೆಗೆ ಬಂದು ಮುಟ್ಟುತ್ತವೆಂಬುದು ಕಾವ್ಯದ ಅಗ್ಗಳಿಕೆಯ ಮತ್ತೊಂದು ಕುರುಹು. ಮಾದೇಶ್ವರ ತಳೆಯುವ ನಿಲುವುಗಳನ್ನು ಕೇಂದ್ರವಾಗಿಟ್ಟುಕೊಂಡೇ ತನ್ನ ವಿಚಾರವನ್ನು ಕಾವ್ಯ ಮಂಡಿಸುತ್ತಾ ಹೋಗುತ್ತದೆ."[27] "ಶೋಷಿತ ಹೆಣ್ಣೊಂದರ ಪರವಾಗಿ ನಿಂತು ಹೋರಾಡುವ ಮಾದೇಶ್ವರ ತನ್ನ ಪ್ರಗತಿಪರ ನಿಲುವನ್ನು ಮತ್ತೊಮ್ಮೆ ದೃಢಪಡಿಸುತ್ತಾನೆ."[28] ಚಿಕ್ಕಮರಳಿ ಅವರ ಮಾತುಗಳು ಮಾದೇಶ್ವರ ಸ್ತ್ರೀ ಪರವಾಗಿ ನಿಂತಿರುವುದನ್ನು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ಗೌರವ ಮತ್ತು ಸಮಾನತೆಯನ್ನು ತಂದುಕೊಡುತ್ತಾನೆ. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮಾದೇಶ್ವರನ ನಿಲುವುಗಳು ಸ್ತ್ರೀ ಪರವಾಗಿಯೇ ಇವೆ ಎಂಬುದಾಗಿ ಖಚಿತವಾಗುತ್ತದೆ.

# ಅಡಿ ಟಿಪ್ಪಣಿ

1. ರಾಜಶೇಖರ ಪಿ.ಕೆ. (ಸಂ) ಮಲೆಮಾದೇಶ್ವರ ಸಂಪುಟ-2, ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು, ಮು-2006, ಪುಟ 509.
2. ಸ್ವಾಮಿ ಬಿ.ಎಸ್. ಮಲೆಯ ಮಾದೇಶ್ವರ ಒಂದು ಅಧ್ಯಯನ, ನವೀನ ಪ್ರಕಾಶನ, ಬೆಂಗಳೂರು, ಮು-1993, ಪುಟ - 292
3. ರಾಜಶೇಖರ ಪಿ.ಕೆ. (ಸಂ) ಮಲೆಮಾದೇಶ್ವರ ಮು-2006 ಪುಟ 870
4. ಅದೇ ಪುಟ 514
5. ಅದೇ ಪುಟ - 521
6. ಅದೇ ಪುಟ 522
7. ಅದೇ ಪುಟ 525
8. ಅದೇ ಪುಟ 225-226
9. ಅದೇ ಪುಟ - 533
10. ಅದೇ ಪುಟ 536
10. ಕೇಶವನ ಪ್ರಸಾದ್ ಕೆ. ಸಂ. ಮಲೆಮಾದೇಶ್ವರ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ. ಮು - 1997 ಪುಟ - 150
12. ರಾಜಶೇಖರ ಪಿ.ಕೆ. (ಸಂ) ಮಲೆಮಾದೇಶ್ವರ ಸಂಪುಟ-2, ಕನ್ನಡ ಮತ್ತು ಸಂಸ್ಕ ತಿ ಇಲಾಖೆ, ಬೆಂಗಳೂರು, ಮು-2006, ಪುಟ 543.
13. ಅದೇ ಪು - 543
14. ಅದೇ ಪು 543-44
15. ಅದೇ ಪು - 548
16. ಅದೇ - ಪುಟ - 558
17. ಅದೇ ಪು. - 558
18. ಅದೇ ಪು - 559
19. ಅದೇ ಪು - 562
20. ಅದೇ ಪು - 567
21. ಅದೇ ಪು - 606
22. ಅದೇ ಪುಟ - 608
23. ಅದೇ ಪುಟ - 616
24. ಅದೇ ಪುಟ - 618
25. ಅದೇ ಪ್ರಸ್ತಾವನೆ ಪೂಟ 75
26. ಅದೇ ಪು - 653
27. ಬೋರೇಗೌಡ ಚಿಕ್ಕಮರಳಿ, ಮಲೆಯ ಮಾದೇಶ್ವರ, ಸಾಹಿತ್ಯಕ ನೆಲೆ (ಲೇಖನ) ಮಲೆಯ ಮಾದೇಶ್ವರ, ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು-2000 ಪು-117
28. ಅದೇ ಪು - 120

# ಅಧ್ಯಾಯ - 3
# ಮಾನವೀಯತೆ

ಮನುಷ್ಯ ತಾನು ಎಲ್ಲಿದ್ದರೂ ಕೂಡ ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಾನೆ. ಇದು ಪ್ರಾಣಿಗಳಲ್ಲೂ ಕಂಡುಬರುವ ಗುಣ. ಅಂದರೆ ಉಳಿವಿಗಾಗಿ ಹೋರಾಟ. ಆದರೆ ಮನುಷ್ಯ ಪ್ರಾಣಿ ಹಂತದಿಂದ ಮೇಲೆ ಬಂದಂತೆಲ್ಲಾ ಪ್ರಾಣಿಗಳ ನಡವಳಿಕೆಯನ್ನು ಬಿಟ್ಟು ಮಾನವೀಯತೆಯನ್ನೂ ಮನುಷ್ಯತ್ವವನ್ನೂ ರೂಢಿಸಿಕೊಂಡ. ಅಂದರೆ ಮನುಷ್ಯನು ಸಮುದಾಯದಲ್ಲಿ ಬದುಕನ್ನು ರೂಪಿಸಿಕೊಂಡ ಮೇಲೆ ಹೋರಾಟ ಪರಸ್ಪರ ಕಿತ್ತಾಟ. ಇವುಗಳನ್ನು ಬಿಟ್ಟು ಸಹಕಾರ ಶಾಂತಿ ಇವುಗಳನ್ನು ಕಲಿತುಕೊಂಡ. ಆದರೆ ಪ್ರಾಣಿ ಸಹಜವಾದ ಬಲತ್ಕಾರ, ಅಸೂಯೆ, ವಿಪರೀತ ಸಿಟ್ಟು ಇವುಗಳ ಇನ್ನೊಂದು ಮುಖವನ್ನು ತನ್ನ ಜೊತೆಯಲ್ಲಿ ಸಾಗಿಸಿಕೊಂಡೇ ಬಂದ. ಇಂತಹ ಅತಿಯಾಸೆ, ಶಂಕೆ, ಕೊಲೆ ಇವುಗಳನ್ನು ಕೆಲವರು ವೃತ್ತಿಗಳನ್ನಾಗಿಸಿಕೊಂಡಿರುತ್ತಾರೆ. ಅಂತಹವರಿಗೆ ಕಾಲಕಾಲಕ್ಕೆ ಬರುವ ಸಮಾಜ ಸುಧಾರಕರು, ಪವಾಡ ಪುರುಷರು ನೀತಿಗಳನ್ನು ಬೋಧಿಸುತ್ತಾರೆ. ಇಂತಹ ಬುಡಕಟ್ಟಿನ ಸಮುದಾಯದಲ್ಲಿ ಜನಗಳ ದುರ್ಗುಣಗಳನ್ನು ನಿವಾರಿಸಿ ಮಾನವೀಯತೆಯನ್ನು ಕಲಿಸಿದವನು ಮಾದೇಶ್ವರ. ಬುಡಕಟ್ಟು ಜನಗಳಲ್ಲಿರುವ ನಿಷ್ಠುರ ಮತ್ತು ಒರಟಾದ ನಡವಳಿಕೆಗಳನ್ನು ಮಾದೇಶ್ವರ ನಿವಾರಿಸುತ್ತಾರೆ. ಮಾನವೀಯತೆಯನ್ನು ಮಾದೇಶ್ವರ ಹೇಗೆ ಜನಗಳಿಗೆ ಕಲಿಸಿದ ಎಂಬುದನ್ನು ಮಹಾಕಾವ್ಯದ ಕೆಲವು ಪಠ್ಯಭಾಗಗಳನ್ನು ಆಧಾರವಾಗಿಟ್ಟುಕೊಂಡು ವಿಶ್ಲೇಷಿಸಲಾಗಿದೆ.

ಮಾದೇಶ್ವರ ತನ್ನ ಹಿಂಬಾಲಕರನ್ನೂ, ಒಕ್ಕಲುಗಳನ್ನೂ ನಿಜವಾದ ಮನುಷ್ಯರನ್ನಾಗಿ ಮಾಡುತ್ತಾನೆ. ಅಂದರೆ ಅವರು ಮಾನವರಾಗಿದ್ದರೂ ಕೆಲವರು ಮಾನವೀಯತೆಯನ್ನು ಮರೆತಿದ್ದರು. ಅಂತಹ ದುಷ್ಟರನ್ನು, ಕರುಣೆಯೇ ಇಲ್ಲದವರನ್ನು ಮಾದೇಶ್ವರ ಅವರ ದುಷ್ಟತನವನ್ನು ನೀಗಿ ಮನುಷ್ಯತ್ವವನ್ನು ಕರುಣಿಸುತ್ತಾನೆ ಮತ್ತು ಆ ಮೂಲಕ ಮನುಷ್ಯರನ್ನಾಗಿ ಮಾಡುತ್ತಾನೆ.

ಈ ಮಾತುಗಳನ್ನು ಹೆಚ್ಚು ಸಮರ್ಥಿಸುವ ಸಂದರ್ಭ ಮಹಾಕಾವ್ಯದ ದುರ್ಗಮಲ್ಲಮ್ಮನ ಸಾಲು ಪಠ್ಯ ಭಾಗ. ಮಲ್ಲಮ್ಮ ಮಾನವೀಯತೆಯೇ ಮೈವೆತ್ತ ಕರುಣಾಮಯಿ, ಮಾದೇಶ್ವರನ ಭಕ್ತೆ. ಮಲ್ಲಮ್ಮನನ್ನು ಮದುವೆ ಮಾಡಿಕೊಟ್ಟ ಮನೆಯ ಒಡತಿ ಅಂದರೆ ಅವಳ ಅತ್ತೆ ಅತ್ಯಂತ ದುಷ್ಟೆ. ಅವಳ ಹೆಸರು ದೀನಮ್ಮ ಅವಳ ಗಂಡನ ಹೆಸರು ಶಂಕರಪ್ಪ. ಇವರಿಗೆ ಮೂರು ಜನ ಗಂಡು ಮಕ್ಕಳು ಕಿರಿಯ ಮಗನಾದ ಸೋಮಯ್ಯ ಮಲ್ಲಮ್ಮನ ಗಂಡ. ದೀನಮ್ಮ ಹಿರಿ ಸೊಸೆಯರ ಬಗ್ಗೆ ತುಂಬ ಅಭಿಮಾನ ಪಡುತ್ತಿದ್ದಳು. ಆದರೆ ಮಲ್ಲಮ್ಮನ ಬಗ್ಗೆ ಅತೀವ ಸಿಟ್ಟು, ಅವಳಿಗೆ ಕೊಡಬಾರದ ಕಷ್ಟಗಳನ್ನು ಕೊಡುತ್ತಿದ್ದಳು. ಅತ್ಯಂತ ಕಡಿಮೆ ಅವಧಿಯಲ್ಲಿ ಹೆಚ್ಚು ಕೆಲಸಗಳನ್ನು ಮಾಡುವಂತೆ ಹೇಳುತ್ತಿದ್ದಳು. ಒಂದು ಕುಕ್ಕೇಲಿ ರಾಗಿ ತುಂಬಿ ಎಸರು ಕಾಯುವಷ್ಟರಲ್ಲಿ ಬೀಸುವಂತೆ, ಭತ್ತವನ್ನು ಕುಟ್ಟುವಂತೆಯೂ ಪೀಡಿಸುತ್ತಿದ್ದಳು. ಆದರೆ ಭಕ್ತೆಯಾದ ಮಲ್ಲಮ್ಮ ಮಾದೇಶ್ವರನನ್ನು ನೆನೆದು ತನ್ನ ಕೆಲಸಗಳನ್ನು ಮಾಡುತ್ತಿದ್ದಳು. ಹೀಗಾಗಿ ಮಾದೇಶ್ವರ ಅವಳ ಕಷ್ಟದಲ್ಲಿ ದಣಿವಿರದಂತೆ ಮಾಡುತ್ತಿದ್ದ

ಅಂದರೆ ಮಾದೇಶ್ವರ ಮಾನವೀಯತೆಯಿರುವ ಯಾರನ್ನಾದರೂ ರಕ್ಷಿಸುತ್ತಿದ್ದ ಎನ್ನುವುದು ಸ್ಪಷ್ಟವಾಗುತ್ತದೆ. ಹಿರಿಸೊಸೆಯರಿಗೆ ಮಾದೇಶ್ವರ ಇಲ್ಲದ ರೋಗಗಳನ್ನು ಕಷ್ಟಗಳನ್ನು ಕೊಡುತ್ತಾನೆ.

ಮಲ್ಲಮ್ಮನ ಅತ್ತೆಯಾದ ದೀನಮ್ಮ ಮಲ್ಲಮ್ಮನಿಗೆ ಅನೇಕ ಕಷ್ಟಗಳನ್ನು ಕೊಡುತ್ತಿದ್ದಳು. ಸರಿಯಾಗಿ ಊಟ ಕೊಡುತ್ತಿರಲಿಲ್ಲ. ಗರ್ವದಿಂದ ಬಾಳುತ್ತಿರುವ ದೀನಮ್ಮನಿಗೆ ಶಿಕ್ಷೆಯನ್ನೂ ನೀಡಿ ಮಾನವೀಯತೆ ಬೋಧಿಸಬೇಕು ಎಂದು ಮಾದೇಶ್ವರ ಮಲ್ಲಮ್ಮನ ಕಷ್ಟವನ್ನೂ ಕಳೆಯಲು ಬರುತ್ತಾನೆ. ಮಲ್ಲಮ್ಮನ ಮನೆಯ ಮುಂದೆ ನಿಂತು ಭಿಕ್ಷೆಯನ್ನು ಸಾರುತ್ತಾನೆ. ಆದರೆ ಅವರಾರಿಗೂ ಮಾದೇಶ್ವರ ಕಂಸಾಳೆ ಶಬ್ದ ಕೇಳುವುದಿಲ್ಲ. ಶರಣೆಯಾದ ಮಲ್ಲಮ್ಮನಿಗೆ ಕೇಳುತ್ತದೆ. ಮಲ್ಲಮ್ಮ ತನ್ನ ಅತ್ತೆಯ ಭಯವಿದ್ದರೂ ಬಂದು ಮಾದೇಶ್ವರನ ಮುತ್ತಿನ ಜೋಳಿಗೆಗೆ ಭಿಕ್ಷೆಯನ್ನು ನೀಡುತ್ತಾಳೆ. ಹಿರಿಯ ಸೊಸೆಯರು ಇದನ್ನು ನೋಡಿ ಅವರ ಅತ್ತೆಗೆ ದೂರನ್ನು ಹೇಳುತ್ತಾರೆ. ನಿನ್ನನ್ನು ಕೇಳದೆ ಭಿಕ್ಷೆಯನ್ನು ನೀಡಿದ್ದಾಳೆ. ಯಾವ ಭಯವೂ ಅವಳಿಗೆ ಇಲ್ಲ ಎಂದು ಹೇಳುತ್ತಾರೆ. ಆಗ ಅತ್ತೆ ಬಂದು ಕೇಳಿದಾಗ ಮಲ್ಲಮ್ಮ ದಾನ ಕೊಡದಿದ್ದರೆ ಜೀನರಾಗುತ್ತೇವೆ, ದಾನ ಕೊಡದ ಜೀನರಿಗೆ ಸ್ವರ್ಗ ಇಲ್ಲ ಎನ್ನುತ್ತಾಳೆ. ಎದುರು ಮಾತನಾಡಿದ ಮಲ್ಲಮ್ಮನಿಗೆ ಅವಳ ಅತ್ತೆ ಮುಂದಲೆ ಹಿಡಿದು ಎಳೆದು ಕಡ್ಡಿಯಲ್ಲಿ ಹೊಡೆಯುತ್ತಾಳೆ.

ಮನುಷ್ಯ ತಾನು ಸಂಪಾದಿಸಿದ ಸಂಪತ್ತಿನಲ್ಲಿ ಕನಿಷ್ಠ ಪ್ರಮಾಣದ ದಾನ ನೀಡಿದರೆ ಅವನ ಸಂಪತ್ತು ಕರಗುವುದಿಲ್ಲ. ಆದರೆ ಅದನ್ನೂ ತಿಳಿಯದೆ ವಿನಾಕಾರಣ ಹೊಡೆಯುವುದು ಅಮಾನವೀಯತೆಯಾಗುತ್ತದೆ. ದೀನಮ್ಮ ಭಿಕ್ಷೆಗೆ ಹೋದ ಮಾದೇಶ್ವರನನ್ನು ಹೀನವಾಗಿ ಬಯ್ಯುತ್ತಾಳೆ. ಸೊಸೆಯು ಕೊಟ್ಟ ಭಿಕ್ಷೆಯನ್ನು ಕಿತ್ತುಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಮಾದೇಶ್ವರನ ಹತ್ತಿರ ದೀನಮ್ಮ ಅಮಾನವೀಯತೆಯಿಂದ ನಡೆದುಕೊಳ್ಳುತ್ತಾಳೆ. ಆಗ ಮಾದೇಶ್ವರ ಒಂದುರೊಟ್ಟಿಯನ್ನು ದಾನ ಕೇಳುತ್ತಾನೆ. ಅದನ್ನೂ ಕೊಡದೆ ದೀನಮ್ಮ ಅವನನ್ನು ಕಳುಹಿಸುತ್ತಾಳೆ. ಆದರೆ ಮಲ್ಲಮ್ಮ ತನ್ನ ಅತ್ತೆ ತನಗೆ ಕೊಟ್ಟ ರೊಟ್ಟಿಯನ್ನು ದನ ಮೇಯಿಸಲು ಹೋದಾಗ ಮಾದೇಶ್ವರನಿಗೆ ನೀಡುತ್ತಾಳೆ. ಅಂದರೆ ಮಲ್ಲಮ್ಮನಿಗೂ ದೀನಮ್ಮನಿಗೂ ಇರುವ ಮಾನವೀಯತೆಯ ಸ್ಪಷ್ಟ ವ್ಯತ್ಯಾಸ ಇಲ್ಲಿ ತಿಳಿಯುತ್ತದೆ. ಮಾದೇಶ್ವರ ಮಲ್ಲಮ್ಮನ ಭಕ್ತಿಗೆ ಮೆಚ್ಚಿ ಅವಳನ್ನು ತನ್ನ ಜಾತ್ರೆಗೆ ಬರುವಂತೆ ಮಾಡುತ್ತಾನೆ. ಮಲ್ಲಮ್ಮನಿಂದ ಅವಳ ಅತ್ತೆಗೂ ಮಾನವೀಯತೆಯನ್ನು ಕಲಿಸುತ್ತಾನೆ. ಅವಳ ಇಡೀ ಕುಟುಂಬವನ್ನು ಉದ್ಧಾರ ಮಾಡುತ್ತಾನೆ.

ಮಾನವೀಯತೆ ಎಂದರೆ ಬೇರೆಯವರಿಗೆ ಗೌರವ ಕೊಡುವಂತೆ ತನ್ನ ದೇವರಿಗೆ ನಿಷ್ಠೆಯಿಂದ ಇರುವುದೂ ಕೂಡ ಮಾನವೀಯತೆಯ ಇನ್ನೊಂದು ಅಂಶ. ಅದನ್ನು ಮಾದೇಶ್ವರ ತನ್ನ ಶಿಶು ಮಕ್ಕಳಾದ ಕಾರಯ್ಯ ಬಿಲ್ಲಯ್ಯರಿಗೂ ಕಲಿಸುತ್ತಾನೆ. ಒಂದು ಸಲ ಇವರ ಮಾನವೀಯತೆಯನ್ನು ಅಂದರೆ ನಿಷ್ಠೆಯನ್ನು ತಿಳಿಯಲು ತಾನು ಸತ್ತಂತೆ ನಟಿಸುತ್ತಾನೆ. ಆಗ ಶಿಶುಮಕ್ಕಳಾದ ಕಾರಯ್ಯ, ಬಿಲ್ಲಯ್ಯರೂ ಕೂಡ ತಮ್ಮ ದೇವರೇ ಇಲ್ಲದ ಮೇಲೆ ತಾವೂ ಇರುವುದಿಲ್ಲ ಎಂದು ಕತ್ತಿಯನ್ನು ನೆಟ್ಟು ಅದರ ಮೇಲೆ ಬೀಳಲು ಹೋಗುತ್ತಾರೆ. ಆಗ

ಮಾದೇಶ್ವರನೇ ಅವರನ್ನು ತಡೆಯುತ್ತಾನೆ. ಮಾದೇಶ್ವರ ಬೇರೆಯವರಿಗೆ ಮಾನವೀಯತೆಯನ್ನು ಕಲಿಸುವಂತೆ, ತನ್ನ ಶಿಶುಮಕ್ಕಳಿಗೂ ಅದು ಅತ್ಯಂತ ಜಾಗೃತಾವಸ್ಥೆಯಲ್ಲಿರುವಂತೆ ಮಾಡುತ್ತಾನೆ. ನೀಲಯ್ಯನಿಗೆ ಮಾದೇಶ್ವರ ಅತಿಯಾಸೆ ಸಲ್ಲದು, ಪರರ ವಸ್ತು ನನ್ನದಲ್ಲ ಎಂಬ ಮಾನವೀಯ ಗುಣವನ್ನು ಕಲಿಸುತ್ತಾನೆ. ಗಂಡನಿಗೆ ಹೆಂಡತಿಯ ಮೇಲೆ ಗೌರವವಿರಬೇಕು ಕ್ರೌರ್ಯ ಸಲ್ಲದು, ಅನುಮಾನ ಸಲ್ಲದು ಎಂದು ತಿಳಿಹೇಳುತ್ತಾನೆ. ನಂಬಿಕೆ ವಿಶ್ವಾಸ ಇರಬೇಕು ಎಂಬ ಮಾನವೀಯ ಗುಣಗಳನ್ನು ಕಲಿಸುತ್ತಾನೆ.

ಮೂಲತಃ ಅತ್ಯಂತ ಕಡು ಬಡವಳಾದ ಕಾಳಮ್ಮ ಅತ್ಯಂತ ಕಷ್ಟದಲ್ಲಿ ಜೀವನವನ್ನು ನಡೆಸುತ್ತಿರುತ್ತಾಳೆ. ಮಾದೇಶ್ವರನನ್ನು ಕಾಡೀಬೇಡಿ ಅವನನ್ನು ಮೆಚ್ಚಿಸಿ ಅವನಿಂದ ಸಂಪತ್ತನ್ನು ಪಡೆಯುತ್ತಾಳೆ. "ಬೇವಿನಕಾಳಿ ಮೊದಲು ಬಡತನ ಬಯಲಾದರೆ ನಿನ್ನ ಒಕ್ಕಲಾಗುತ್ತೇನೆ. ಮಕ್ಕಳಿಗೆ ನಿನ್ನ ಹೆಸರಿಡುತ್ತೇನೆ. ಬಿತ್ತಿದ ಬೆಳೆ ಮೀಸಲಾಗಿಡ್ತೇನಿ ಅಂತ ಬೇಡಿಕೊಂಡಿದ್ದವಳು ಸಿರಿ ಸಂಪತ್ತು ಬಂದಾಗ ಮಾದಪ್ಪ ಎಣ್ಣೆ ಮಜ್ಜಣಕ್ಕೆ ಎಳ್ಳು ಕೇಳಲು ಬಂದಾಗ ಆಲಸ್ಯ ಮಾಡುತ್ತಾಳೆ. ಬೇವಿನ ಕಾಳಿಯಲ್ಲಿ ಅಷ್ಟುಮದ ಅಡಗಿತ್ತು. ಹುಲ್ಲು ಕಿತ್ತುಕೊಂಡು ಮಾರಿ ಜೀವನ ಮಾಡುತ್ತಿದ್ದ ಈಕೆಗೆ ಐಶ್ವರ್ಯ ಬಂದಾಗ ಅಹಂಕಾರ, ದುಷ್ಟಬುದ್ಧಿ ಹುಟ್ಟಿತು. ಯಾರಿಗೆ ಯಾಕೆ ಕೊಡಬೇಕು? ಎಂಬ ಮನೋಭಾವ ಉಂಟಾಗುತ್ತದೆ."[1] ಮೇಲಿನ ಮಾತುಗಳಲ್ಲಿಯೇ ಬೇವಿನ ಕಾಳಿಯ ವ್ಯಕ್ತಿತ್ವವನ್ನು ಕಾಣಬಹುದು, 'ಸಂಕಟದಲ್ಲಿ ವೆಂಕಟರಮಣ' ಎಂಬಂತೆ ಸಂಕಟದಲ್ಲಿ ಬಡತನದಲ್ಲಿದ್ದಾಗ ಮಾತ್ರ ಮಾದೇಶ್ವರನ ಭಕ್ತಳಾಗಿರುತ್ತಾಳೆ. ಆದರೆ ಮಾದೇಶ್ವರ ಅವಳಿಗೆ ಸಂಪತ್ತನ್ನು ಕೊಟ್ಟ ತಕ್ಷಣವೇ ಅವಳು ಬದಲಾಗುತ್ತಾಳೆ. ದಾನ ಧರ್ಮಗಳು ಮರೆಯಾಗುತ್ತವೆ. ಸಾಕ್ಷಾತ್ ಸ್ವತಃ ಮಾದೇಶ್ವರನೇ ಬಂದು ತನಗೆ ಎಳ್ಳನ್ನು ದಾನವಾಗಿ ಕೊಡು ಎಂದು ಕೇಳಿದಾಗಲೂ ಅವಳು ಕೊಡುವುದಿಲ್ಲ.

ಬೇವಿನಕಾಳಿ ಸೊಸೆಯರಿಗೆ ಬುದ್ಧಿ ಹೇಳುತ್ತಾ "ಕೆಟ್ಟರೆ ನಂಟರಿಲ್ಲ ತಿರುದು ತಿನ್ನುವಾಗ ದೇವರಿಲ್ಲ, ಯಾರು ಅಯ್ಯಗಳು ಜೋಗಿ ಜಂಗಮರು ಬಂದರೂ ಒಂದು ಹಿಡಿ ರಾಗಿ ಕೊಡಬೇಡಿ ನೀರು ಕೊಡಬೇಡಿ, ಇರುವೆಗಳು, ಕಾಗೆ ಗುಬ್ಬಚ್ಚಿ ಜ್ವಾಪಾನ ಕೆಲಸಗಾರರು ಎಳ್ಳು ತಿಂದು ಬಿಟ್ಟರು ಎಳ್ಳು ಕಮ್ಮಿ ಆಗುತ್ತೆ ಜ್ವಾಪಾನ"[2] ಎನ್ನುತ್ತಾಳೆ. ಒಂದು ಕಾಲದಲ್ಲಿ ಒಂದು ಹೊತ್ತಿನ ಊಟಕ್ಕೂ ಗತಿಯಿಲ್ಲದೆ ಹಸಿದಿರುತ್ತಿದ್ದ ಕಾಳಮ್ಮನಿಗೂ ಈ ರೀತಿಯ ದುರಾಸೆ ಬರುತ್ತದೆ. ಕಾಲಾಂತರದಲ್ಲಿ ತನ್ನ ಸಹಾಯವನ್ನು, ತನ್ನನ್ನು ಬೇಡಿಕೊಂಡ ದಿನವನ್ನು ಮರೆತಿರಬಹುದೆಂದು ಸ್ವತಃ ಮಾದೇಶ್ವರನೇ ಬಂದು ತನ್ನ ಪರಿಚಯವನ್ನೂ, ತನ್ನ ಮಜ್ಜಣಕ್ಕೆ ಎಳ್ಳನ್ನೂ ಬೇವಿನಕಾಳಿಯ ಹತ್ತಿರ ಕೇಳುತ್ತಾನೆ. ಆದರೆ ನೀನು ಯಾರೆಂಬುದೇ ನನಗೆ ಗೊತ್ತಿಲ್ಲ ಒಂದು ಎಳ್ಳನ್ನೂ ನಿನಗೆ ಕೊಡುವ ಮಗಳಲ್ಲ ಎಂದು ಬೈದು ಕಳುಹಿಸುತ್ತಾಳೆ. ತನ್ನ ಮನೆಗೆ ಯಾರಾದರೂ ಗೊರವ, ಜೋಗಿ, ಜಂಗಮ, ದಾಸಯ್ಯಗಳು ಬರಬಹುದೆಂದು ಬಿಚ್ಚುಗತ್ತಿಯ ವೀರರನ್ನು, ಬೀಜದ ಹೋರಿಯನ್ನು, ನಾಯಿಗಳನ್ನು ಮನೆಯ ಬಾಗಿಲಲ್ಲಿರಿಸಿರುತ್ತಾಳೆ. ಹಾಗಾಗಿ ಯಾವ ಜಂಗಮನೂ ಹೆದರಿ ಇತ್ತ ಕಡೆ ಸುಳಿಯುತ್ತಿರಲಿಲ್ಲ. ಒಂದು ವೇಳೆ ಬಂದರೂ ಅವರಿಗೆ ನಾಯಿಯಿಂದ ಕಚ್ಚಿಸುತ್ತಿದ್ದಳು. ಒಂದು ಎಳ್ಳನ್ನು ಕೊಟ್ಟರೆ ಅಷ್ಟು ಕಮ್ಮಿಯಾಗುತ್ತದೆ ಎಂದು ಅವಳು ಭಾವಿಸಿದ್ದಾಳೆ. ಒಮ್ಮೆ ಮಾದೇಶ್ವರ ಎಳ್ಳಿನ ಕಣಕ್ಕೆ ಹೋದಾಗ ಎಳ್ಳನ್ನು ಕೊಡದೆ ಅವನನ್ನೇ

ಕೋಲಿನಿಂದ ಹೊಡೆಯಲು ಕಣದ ತುಂಬಾ ಓಡಾಡಿಸುತ್ತಾಳೆ. ಇಷ್ಟೊಂದು ದುರಾಸೆಯನ್ನು ಅಹಂಕಾರವನ್ನು ಹೊಂದಿರುತ್ತಾಳೆ.

ಇಷ್ಟೊಂದು ಅಹಂಕಾರದಿಂದ ಮೆರೆಯುವ ಮಾನವೀಯತೆಯನ್ನು ಮರೆತ ಬೇವಿನಕಾಳಿಯನ್ನು ನಾಶಮಾಡುವುದರ ಮೂಲಕ ಇತರರಿಗೆ ಇದು ಒಂದು ತಿಳುವಳಿಕೆಯಾಗುವಂತೆ ಮಾಡುತ್ತಾನೆ. ಅವಳ ಹಿರಿಸೊಸೆ ದೇವಾಜಮ್ಮನ ಭಕ್ತಿಗೆ ಸಾತ್ವಿಕ ಗುಣಕ್ಕೆ ಮೆಚ್ಚಿ ಮಾನವೀಯತೆಯ ಗುಣಗಳನ್ನು ಮೈಗೂಡಿಸಿಕೊಂಡಿರುವ ಅವಳಿಗೆ ಮತ್ತೆ ಬದುಕನ್ನು ನೀಡುತ್ತಾನೆ. ಅಂದರೆ ಮಾದೇಶ್ವರ ಯಾರು ಮಾನವೀಯತೆಯನ್ನು ಬೋಧಿಸಲು ಪ್ರಯತ್ನಿಸುತ್ತಾರೆ. ಆದರೆ ಅವರು ಕಲಿಯದಿದ್ದರೆ ಅವರನ್ನುನಾಶಮಾಡುತ್ತಾನೆ. ಮಾನವೀಯತೆಗೆ ಎಷ್ಟು ಬೆಲೆ ಕೊಡುತ್ತಾನೆ ಮತ್ತು ಮಾನವೀಯತೆಯನ್ನೂ ಮರೆತವರಿಗೆ ಎಂತಹ ಶಿಕ್ಷೆ ಕೊಡುತ್ತಾನೆ ಮಾದೇಶ್ವರ ಎಂಬುದಕ್ಕೆ ಇದೇ ಅತ್ಯಂತ ಪ್ರಮುಖ ಸಂಗತಿಯಾಗಿದೆ. ಈ ಮೂಲಕ ಮಾದೇಶ್ವರ ಯಾರಿಗೆ ಮಾನವೀಯತೆ ಇದೆಯೋ ಅವರು ಮಾತ್ರ ಬದುಕಲು ಅರ್ಹರು ಎಂದು ಖಾತ್ರಿಪಡಿಸುತ್ತಾನೆ.

ಬೇರೆಯವರನ್ನು ಕೊಲ್ಲುವುದು, ಅವರನ್ನು ನಂಬಿಸಿ ಮೋಸಗೊಳಿಸುವುದು ಆಹಾರದಲ್ಲಿ ವಿಷ ಬೆರೆಸುವುದು ಅವರ ಸಂಪತ್ತು ದೋಚುವುದು ಕೂಡ ಅತ್ಯಂತ ಅಮಾನವೀಯವಾದ ಕೃತ್ಯಗಳು. ಇಂತಹ ವ್ಯಕ್ತಿತ್ವವನ್ನು ಹೊಂದಿದ್ದ ಇಕ್ಕೇರಿ ದೇವಮ್ಮನನ್ನು ಮಾದೇಶ್ವರ ಸರಿದಾರಿಗೆ ತರುತ್ತಾನೆ. ದೇವಮ್ಮ ಸಾಮಾನ್ಯ ಜನರಾಗಿರಲಿ, ಜಂಗಮ, ಜೋಗಿ ದಾಸಯ್ಯಗಳಾಗಿರಲಿ ಅವರಲ್ಲಿ ಐಶ್ವರ್ಯ ಇದೆ ಎಂದು ತಿಳಿದ ತಕ್ಷಣ ಅವರಿಗೆ ಮದ್ದಿಕ್ಕಿ, ವಿಷದ ಕಜ್ಜಾಯವನ್ನು ಇಟ್ಟು ಕೊಲ್ಲುವುದು ನಂತರ ಅವರಲ್ಲಿದ್ದ ಸಂಪತ್ತನ್ನು ದೋಚುವುದು. ಇದು ಅವಳ ವೃತ್ತಿಯೇ ಆಗಿದ್ದು ಬದುಕಿನ ಪ್ರಧಾನ ಭಾಗವಾಗಿತ್ತು. ಇಂತಹ ವ್ಯಕ್ತಿತ್ವ ಹೊಂದಿರುವವಳನ್ನು ಮಾದೇಶ್ವರ ಮಾನವೀಯತೆಯನ್ನು ಕಲ್ಪಿಸುತ್ತಾನೆ. ಅಂತಹ ಸಂದರ್ಭವೇ ವಿಶೇಷವಾಗಿ ನಮ್ಮ ಗಮನ ಸೆಳೆಯುವಂತಹದ್ದು.

ಒಂದು ದಿನ ದೈನಂದಿನ ಭಿಕ್ಷೆಗೆಂದು ಇಕ್ಕೇರಿ ದೇವಮ್ಮನ ಮನೆಗೆ ಮಾದೇಶ್ವರ ಮುಡುಕುತೊರೆ ಮಲ್ಲಣ್ಣ, ಪದ್ಯದ ರಂಗಸ್ವಾಮಿ ಇವರುಗಳು ಬರುತ್ತಾರೆ. ದೇವಮ್ಮ ಇವರು ಧರಿಸಿದ್ದ ಚಿನ್ನ ಬೆಳ್ಳಿ ರತ್ನ ಎಲ್ಲವನ್ನೂ ನೋಡಿ ಇವರನ್ನು ಕೊಲ್ಲಬೇಕೆಂದು ತೀರ್ಮಾನಿಸುತ್ತಾಳೆ. ಬಂದು ಅವರಿಗೆ ಮೊದಲು ನಮಸ್ಕಾರ ಮಾಡುತ್ತಾಳೆ. ನಂತರ ಅವರಿಗೆ ಅತ್ಯಂತ ವಿನಯವಾಗಿ ಭಕ್ತಿಪೂರ್ವಕರಾಗಿ ಹೀಗೆ ಹೇಳುತ್ತಾಳೆ.

"ನಮ್ಮಲ್ಲಿ ಈವತ್ತುನ ದಿನ ಬಂದೇವುರ ಕಾರ್ಯ ಅದೆ
ಊರಲೆಲ್ಲ ಭಿಕ್ಷಾ ಮಾಡ್ಕೊಂಡು
ಮದ್ಯಾನದೊತ್ಗೆ ಬರಬೇಕು
ದಾಸಪ್ಪ ಗುಡ್ಡಪ್ಪನವುರೆ
ನಾನು ಹನ್ನೆರ್ಡೊರುಸ್ನಿಂದ ಹರ್ಕೆ ಮಾಡಿಕೊಂಡಿದೆ"[3]

ಈ ಮಾತುಗಳನ್ನು ಅತ್ಯಂತ ನಮ್ರತೆಯಿಂದಲೇ ಹೇಳುತ್ತಾಳೆ. ಅವಳು ಸಾಮಾನ್ಯವಾಗಿ ಊಟಕ್ಕೆ ಕರೆಯದೆ ಹನ್ನೆರಡು ವರುಷದಿಂದ ಹರಕೆ ಮಾಡಿಕೊಂಡಿದ್ದೇನೆ ಎನ್ನುತ್ತಾಳೆ. ಏಕೆಂದರೆ ಹೀಗೆ ಹೇಳಿದರೆ ಖಂಡಿತ ನಮ್ಮ ಮನೆಗೆ ಅವರು ಊಟಕ್ಕೆ ಬರುತ್ತಾರೆ. ಇಲ್ಲವಾದ ಭಿಕ್ಷೆ ಸ್ವೀಕರಿಸಿ ಹೊರಟುಹೋಗುತ್ತಾರೆ ಎಂದು ತಿಳಿದಿದ್ದಾಳೆ. ಅವಳ ಮೈಮೇಲಿರುವ ಬಂಗಾರದ ಬಗ್ಗೆ ಯೋಚಿಸುತ್ತಾಳೆ.

"ಇವುರ್ಗೆ ವಿಷಯ ಕಜ್ಜಾಯವನ್ನು ಮಾಡ್ಬುಟ್ಟು
ತಿನ್ಸಿ ಇವುರ್ನ ಕೊಂದಾಕ್ಬೇಕು
ಇವುರ್ ಮೈಮೇಲಿರುವಂತ ಬಂಗಾರನೆಲ್ಲ ಕಳಕೊಂಡ್ರೆ
ನಮ್ಮೊಮ್ಮಕುಳ ಮರಿಮಕ್ಳು ತಿನ್ನೊಗಂಟ ಮುಗಿಯೋಕಿಲ್ಲವಲ್ಲ"[4]

ಅಂದರೆ ಅಮಾನವೀಯ ನೆಲೆಯಿಂದ ಸಂಪತ್ತನ್ನು ಸಂಗ್ರಹಿಸುವುದು ಅವಳಿಗೆ ಅಭ್ಯಾಸವಾಗಿದೆ. ಒಂದು ಸಲವೂ ಅವಳಿಗೆ ಪಾಪ ಪ್ರಜ್ಞೆ ಕಾಡಿಲ್ಲ. ಬದಲಾಗಿ ದೋಚಿದ ಸಂಪತ್ತು ಎಷ್ಟು ತಲೆಮಾರು ತಿಂದರೂ ಸವೆಯದು ಎಂದು ಯೋಚಿಸುತ್ತಾಳೆ. ಅವರಿಗೆ ವಿಷಯದ ಕಜ್ಜಾಯವನ್ನು ಕೊಟ್ಟು ಕೊಲ್ಲಬೇಕೆಂದು ಯೋಚಿಸುತ್ತಾಳೆ. ದೇವಮ್ಮ ತನ್ನ ಮನೆಯ ಆಳುಗ ಳನ್ನು ಕರೆದು ವಿಷದ ಹಾವುಗಳನ್ನು ಹಿಡಿದು ಅವುಗಳಲ್ಲಿನ ವಿಷ ವನ್ನು ತರಬೇಕೆಂದು ಕಳ್ಳಿಹಾಲನ್ನು ತರಬೇಕೆಂದು ಆಜ್ಞಾಪಿಸುತ್ತಾಳೆ. ಈ ಎರಡೂ ವಿಷ ಪದಾರ್ಥಗಳನ್ನು ಈ ಮೂವರಿಗೆ ಕಜ್ಜಾಯವೇ ಮೊದಲಾದ ತಿನಿಸುಗಳ ಮೂಲಕ ಬಡಿಸುತ್ತಾಳೆ. ಆಳುಗಳಿಗೆ ಮನೆಯ ಹಿಂದಿರುವ ಹಿತ್ತಲಿನಲ್ಲಿ ಮೂರು ಹಳ್ಳವನ್ನು ತೆಗೆಯಲು ಆಜ್ಞಾಪಿಸುತ್ತಾಳೆ.

ವಿಷಯದ ಕಜ್ಜಾಯುವನ್ನು ಬಡಿಸಿದ ದೇವಮ್ಮ ಮಾದೇಶ್ವರನೇ ಮೊದಲಾಗಿ ಯಾರೂ ಸಾಯದಿರುವುದನ್ನು ನೋಡಿ ನಟಿಕೆ ನರುಕುತ್ತಾಳೆ. ಮಾದೇಶ್ವರ ತನಗೆ ಕೊಟ್ಟ ವಿಷದ ಕಜ್ಜಾಯಗಳನ್ನು ದೇವಮ್ಮನ ತಂಗಿಯ ಮೂಲಕ ಅವಳ ಮಕ್ಕಳಿಗೆ ಹಿಂತಿರುಗಿಸಿ ಅವರು ತಿಂದು ಸತ್ತು ಬೀಳುವಂತೆ ಮಾಡುತ್ತಾನೆ. ಆಗ ದೇವಮ್ಮ ತನ್ನ ಮಕ್ಕಳು ಸತ್ತಿದ್ದನ್ನು ಕಂಡು ತಂಗಿಯನ್ನು ಚೆನ್ನಾಗಿ ಬಯ್ಯುತ್ತಾಳೆ, ಶಾಪಹಾಕುತ್ತಾಳೆ. ಅವಳ ಮುಂದಲೆ ಹಿಡಿದು ಜಗಳವಾಡುತ್ತಾಳೆ ಮತ್ತು ಪಂಚಾಯಿತಿಯಲ್ಲಿ ಮಾದೇಶ್ವರ ಲಂಚ ಕೇಳಲು ದೇವಮ್ಮ ಹೀಗೆ ಹೇಳುತ್ತಾಳೆ.

"ಹಣ ಅಂಬೋ ಮಾತ ಹೇಳಬ್ಯಾಡಿ
ನನ್ ಪ್ರಾಣವೇ ಹೋದಂಗಾಯ್ತದೆ
ಲಂಚ ಕೊಟ್ರೆ ನನ್ನ ಸತ್ತ ಮಕ್ಳು
ಬದುಕಿ ಬಂದಾವ ಅನ್ತಾಳೆ
ಸತ್ರೆ ಸಾಯಲಿ"[5]

ಇಂತಹ ಕಠಿಣ ಹೃದಯಉಳ್ಳವಳು. ಆಕೆಗೆ ದ್ರವ್ಯವೇ ಹೆಚ್ಚು ಮುಖ್ಯವಾದದ್ದು. ಯಾರಿಗೂ ಒಂದು ಬಿಡಿಗಾಸನ್ನೂ ಕೊಡಲಾರಳು. ತನ್ನ ಮಕ್ಕಳನ್ನು ಸಮಾಧಿ ಮಾಡಿ ಬರುತ್ತಾಳೆ. ಆಗಲೂ ಅವಳು ಹಣದ ಬಗ್ಗೆಯೇ ಚಿಂತಿಸುತ್ತಿರುತ್ತಾಳೆ. ಅವಳ ಏಳು ಕೊಪ್ಪರಿಗೆ ದ್ರವ್ಯ ನಾಶವಾಗಲು ಅವಳ ದುಃಖ ಹೇಳಲು

ಅಸಾಧ್ಯ. ಅತ್ಯಂತ ಅಮಾನವೀಯವಾಗಿ ನಡೆದುಕೊಂಡವರಿಗೆ ಮಾದೇಶ್ವರ ಮಾನವೀಯತೆಯ ಪಾಠವನ್ನೂ ಕೂಡ ಕಠಿಣವಾಗಿಯೇ ಕಲಿಸುತ್ತಾನೆ. ಐಶ್ವರ್ಯದ ಮೇಲೆ ಎಷ್ಟೊಂದು ಆಸೆ ಇತ್ತೆಂದರೆ ದಾಸಯ್ಯ, ಜೋಗಿ ಜಂಗಮ ಯಾರಾದರೂ ಭಿಕ್ಷೆ ಕೇಳಳು ಬಂದಾಗ ಅವರ ಮೈಮೇಲಿನ ಒಡವೆಗಳನ್ನು ನೋಡಿದಾಗ ಆವಳಿಗ ಮೂರ್ಛೆಯೇ ಬಂದುಬಿಡುತ್ತಿತ್ತು. ಅಂದರೆ ಅವಳಿಗೆ ಒಂದು ಸಾರಿ ಮೈಮೇಲ ಒಡವೆಗಳನ್ನು ನೋಡದರೆ ತಾನು ಪಡೆದೇ ಪಡೆಯುತ್ತೇನೆಂಬ ನಂಬಿಕೆ ಇತ್ತು. ಈಗಿರುವ ಸಂಪತ್ತಿನ ಜೊತೆಗೆ ಈಗ ಬರುವ ಸಂಪತ್ತೂ ಸೇರಿದರೆ ಹೆಚ್ಚಾಗುತ್ತದಲ್ಲ ಎಂಬ ಅತಿಯಾಸೆಯಿಂದ ಕೂಡಿದ್ದಳು. ಈ ಅತಿಯಾಸೆ ಅಮಾನವೀಯತೆಯೇ ಅವಳ ಜೀವನಕ್ಕೆ, ಮಕ್ಕಳಿಗೆ, ಸಂಪತ್ತಿಗೆ ಸಂಚಕಾರ ತಂದಿತು.

ಕೊನೆಗೆ ಮಾದೇಶ್ವರನ ದಯೆಯಿಂದ ಇವಳು ತನ್ನ ಅಮಾನವೀಯತೆಯನ್ನು ಬಿಟ್ಟು ಮಾನವೀಯತೆಯನ್ನು ಕಲಿತು ಮನುಷ್ಯಳಾಗುತ್ತಾಳೆ. ಮಾದೇಶ್ವರನ ಭಕ್ತಳಾಗುತ್ತಾಳೆ. ಇಡೀ ಜೀವನವನ್ನು ಅವನ ಸೇವೆಗೆ ಮುಡುಪಾಗಿಡುತ್ತಾಳೆ. ತಾನು ಮಾಡಿದ ತಪ್ಪನ್ನು ಮಾದೇಶ್ವರನಿಂದ ಅರಿತುಕೊಳ್ಳುತ್ತಾಳೆ. ಬೇರೆಯವರಿಗೆ, ಬೇರೆಯವರ ಮಕ್ಕಳಿಗೆ ವಿಷ ಇಕ್ಕಿದರೆ ಅದು ನಮ್ಮ ಮಕ್ಕಳಿಗೇ ತಿರುಗುತ್ತದೆ ಎಂದು ತಿಳಿಯುತ್ತಾಳೆ. ನಮಗೆ ನೋವಾದಾಗ, ನಮ್ಮ ಮಕ್ಕಳಿಗೆ ಸಾವು ಬಂದಾಗ ಹೇಗೆ ದುಃಖವಾಗುತ್ತದೋ ಹಾಗೆಯೇ ಬೇರೆಯವರಿಗೂ ದುಃಖವಾಗುತ್ತದೆ ಎಂಬ ಸರಳ ಸತ್ಯವನ್ನು ಮಾನವೀಯತೆಯ ಮುಖವನ್ನು ಅರ್ಥವಾಗುವಂತೆ ಮಾಡುತ್ತಾನೆ. ಹೀಗೆ ಮಾದೇಶ್ವರ ಒಂದು ಸಮುದಾಯದ ಅಥವ ಒಬ್ಬ ವ್ಯಕ್ತಿಯ ಬದುಕಿನಲ್ಲಿ ಮಾನವೀಯತೆ ಎಷ್ಟು ಮುಖ್ಯ ಎಂಬುದನ್ನು ತಿಳಿಸಿ ಅವರವರ ಜೀವನದಲ್ಲಿ ಅದನ್ನು ಅಳವಡಿಸಿಕೊಳ್ಳುವಂತೆ ಮಾಡುತ್ತಾನೆ.

ಮಾದೇಶ್ವರ ತನ್ನ ಒಕ್ಕಲನ್ನು ಪಡೆಯುವ ಮತ್ತು ತನಗೆ ಗುಡಿಕಟ್ಟಿಸಿಕೊಳ್ಳುವ ಕಡೆಗೆ ಗಮನ ಹರಿಸುತ್ತಾನೆ. ಆಗ ಆಲಂಬಾಡಿ ಜುಂಜೇಗೌಡನನ್ನು ತನ್ನ ಒಕ್ಕಲನ್ನಾಗಿ ಪಡೆದು ಗುಡಿ ಕಟ್ಟಿಸಿಕೊಳ್ಳಬೇಕೆಂದು ಮಾದೇಶ್ವರ ತೀರ್ಮಾನಿಸುತ್ತಾನೆ. ಜುಂಜೇಗೌಡ ಅತ್ಯಂತ ಐಶ್ವರ್ಯವಂತನಾಗಿ ಬಾಳುತ್ತಿರುತ್ತಾನೆ. ಅದನ್ನು ಗಮನಿಸಿದ ಮಾದೇಶ್ವರ ಅವನನ್ನು ಒಕ್ಕಲು ಪಡೆಯಲು ಮುಂದಾಗುತ್ತಾನೆ. ಆಗ ಮೊದಲು ತಾನು ಭಿಕ್ಷೆ ಮಾಡಲು ಹೋಗಬೇಕೆಂದು ಜುಂಜೇಗೌಡನ ಮನೆಗೆ ಭಿಕ್ಷೆಗೆ ಬರುತ್ತಾನೆ. ನಂತರ ಅವನ ಮನೆಯಲ್ಲಿರುವ ಜಲುಗೊಂಬಿನ ಬಿಳಿ ಹಸುವಿಗೆ ತನ್ನ ಸ್ಥಳಕ್ಕೆ ಬರುವಂತೆ ಹೇಳುತ್ತಾನೆ.

"ಅಪ್ಪಾ ಹಿಂಡುಗ್ಮೇಲಾದ ಜಲುಗೊಂಬಿನ ಬಿಳೀ ಹಸ್ವೆ
ನಾನು ಏಳ್ಮಲೆ ಕುಲಾಸ್ದಲ್ಲಿ ನೆಲೆಗೊಂಡಿವ್ನಿ
ನಾನು ನೆಲೆಗೊಂಡಿರುವಂತ ಸ್ಥಳದಲ್ಲಿ ಬಂದು
ನಾನಿರುವಂತ ಮೂಗುತ್ತಕ್ಕೆ
ನಾಲಕಾಲ್ನು ಪೊತ್ತುರ್ರುಬುಟ್ಟು
ನನ್ನ ಅವಸೋಕುಕ್ಕೆ ಹಾಲನ್ನು ಹಿಂಡು ಅಂತ್ಹೇಳ್ಬುಟ್ಟು

ಬಿಳೀ ಹಸೂನ ಮ್ಯಾಲೆ ದ್ರಿಷ್ಟಿ ಮಡುಗ್ಬುಟ್ಟು
ಏಳ್ಮಲೆ ಮಾದೇಶ್ವರ
ಅಡವಿ ಅರಣ್ಯಕ್ಕೆ ಬತ್ತವುರೆ"6

ಜುಂಜೇಗೌಡನ ಮನೆಯಲ್ಲಿರುವ ಅನೇಕ ಪಸುಗಳಲ್ಲಿ ಕಾವ್ಯವೇ ಸೂಚಿಸುವಂತೆ ಹಿಂಡಿಗೆ ಮೇಲಾದ ಜಲುಕೊಂಬಿನ ಬಿಳೀ ಹಸುವಿಗೆ ಮಾದೇಶ್ವರ ತಾನು ವಾಸವಾಗಿರುವ ಹುತ್ತಕ್ಕೆ ಬಂದು ಹಾಲು ಕರೆಯಬೇಕೆಂದು ಹೇಳುತ್ತಾನೆ. ಆ ಹಸುವು ಪ್ರತಿದಿನವೂ ಹುತ್ತಕ್ಕೆ ಅಂದರೆ ಮಾದೇಶ್ವರ ನೆಲೆಸಿರುವ ಸ್ಥಳದಲ್ಲಿ ಬಂದು ಹಾಲನ್ನು ಹಿಂಡುತ್ತಿತ್ತು. ಆದರೆ ಮನೆಯಲ್ಲಿ ಬಂದಾಗ ಹಾಲಿನ ಬದಲು ರಕ್ತವನ್ನು ಹಿಂಡುತ್ತಿತ್ತು. ಆಗ ಜುಂಜೇಗೌಡನಿಗೆ ಸಿಟ್ಟು ಬರುತ್ತದೆ. ಮೇಯಿಸಲು ಹೋದಾಗ ತಪ್ಪಿಸಿಕೊಂಡು ಎಲ್ಲಿಗೋ ಹೋಗುತ್ತದೆ. ಆದರೆ ಬರುವಾಗ ಹಸುಗಳ ಜೊತೆ ಮನೆಗೆ ಬರುತ್ತದೆ ಎಂದು ಆಗ ಅದನ್ನು ಕಂಡುಹಿಡಿಯಬೇಕೆಂದು ನಿರ್ಧರಿಸುತ್ತಾನೆ. ತನ್ನ ಆಳುಗಳೊಂದಿಗೆ, ಊಟವನ್ನು ತೆಗೆದುಕೊಂಡು ಮಚ್ಚು ಕತ್ತಿಗಳನ್ನು ತೆಗೆದುಕೊಂಡು ಬರುತ್ತಾನೆ. ಆಗ ಆ ಹಸು ಹಾಲು ಕರೆಯುತ್ತಿದ್ದ ಹುತ್ತವಿರುವ ಸ್ಥಳಕ್ಕೆ ಬಂದು ಆ ಹುತ್ತವನ್ನು ಕೊಚ್ಚಿಹಾಕುವಂತೆ ಆಳುಗಳಿಗೆ ಹೇಳುತ್ತಾನೆ. ಹಾಗೆ ಯಾವುದೇ ಯೋಚನೆಯೂ ಇಲ್ಲದೆ ಕೊಚ್ಚುತ್ತಾರೆ. ಆ ಕೊಡಲಿ ಮತ್ತು ಮಚ್ಚಿನ ಏಟು ನೇರವಾಗಿ ಹುತ್ತವನ್ನು ಕತ್ತರಿಸಿಕೊಂಡು ಅದರ ಒಳಗಿದ್ದ ಮಾದೇಶ್ವರನ ತಲೆಗೆ ಬೀಳುತ್ತದೆ. ಅಂದರೆ ತಾನೇ ಬೆಳೆಸಿದ ಹಸುವನ್ನು ಮತ್ತು ಅದು ಹಾಲು ಕರೆದ ಸ್ಥಳವನ್ನು ಕೊಚ್ಚುವ ಸ್ಥಿತಿಗೆ ಆಕ್ರೋಶಕ್ಕೆ ಕ್ರೌರ್ಯಕ್ಕೆ ಒಳಗಾಗುತ್ತಾನೆ. ಒಂದು ರೀತಿಯಲ್ಲಿ ಕೋಪಕ್ಕೆ ಮನಸ್ಸು ಕೊಡುವ ಯಾವುದೇ ಮನುಷ್ಯ ತನ್ನ ಮನುಷ್ಯತ್ವವನ್ನು ಕಳೆದುಕೊಂಡಿರುವ ಹಂತದಲ್ಲಿರುತ್ತಾನೆ. ಅಂತಹ ವ್ಯಕ್ತಿಗಳಿಗೆ ವ್ಯವಧಾನವನ್ನು ನೀತಿಯನ್ನು ಮಾನವೀಯತೆಯನ್ನು ಮಾದೇಶ್ವರ ಕಲಿಸುತ್ತಾನೆ. ಗಮನಿಸಬೇಕಾದ ಅಂಶವೆಂದರೆ ಮಾದೇಶ್ವರ ತಾನು ಪಡೆದ ಒಕ್ಕಲುಗಳಿಗೆ ಸಂಪತ್ತನ್ನು ನೀಡುತ್ತಾನೆ. ಜೊತೆಗೆ ಮಾನವೀಯತೆ ದಾನ, ಧರ್ಮ, ಶಾಂತಿ, ಪೂರ್ವಾಲೋಚನೆ ಮೊದಲಾದ ಮಾನವೀಯ ಮೌಲ್ಯಗಳನ್ನು ಕೂಡ ಕಲಿಸುತ್ತಾನೆ. ಕಲಿತವರು ತಮ್ಮ ಜೀವನಪೂರ್ತಿ ಅವುಗಳನ್ನು ಅಳವಡಿಸಿಕೊಳ್ಳುವಂತೆ ಮಾಡುತ್ತಾನೆ. ಮಾದೇಶ್ವರನ ವಿಶೇಷ ನಿಲುವು ಪ್ರಕಟವಾಗುವುದು ಇಲ್ಲಿಯೇ.

ಮಾದೇಶ್ವರ ಬೇಡರ ಕನ್ನಯ್ಯನನ್ನು ತನ್ನ ಶಿಶುಮಗನಾಗಿ ಪಡೆಯುತ್ತಾನೆ. ಆದರೆ ಕನ್ನಯ್ಯ ಮೂಲತಃ ಬೇಟೆಗಾರನಾಗಿರುತ್ತಾನೆ. ಅವನನ್ನು ಮಾದೇಶ್ವರ ಅಹಿಂಸಾ ಮಾರ್ಗಕ್ಕೆ ತರುತ್ತಾನೆ. ಬೇಟೆ ಎಂದರೆ ಜೀವಹಿಂಸೆ ಅದನ್ನು ಮಾಡುವುದು ಶ್ರೇಯಸ್ಕರವಲ್ಲ ಎಂದು ಬೇಡರ ಕನ್ನಯ್ಯನಿಗೆ ಹೇಳುತ್ತಾನೆ.

"ಛೇ ಬ್ಯಾಡ್ರು ಕನ್ನಯ್ಯ
ನಾನು ಮಾವ್ಸ ಮಡ್ಡಿಯನ್ನು ಮುಟ್ಟಲಾರಿ
ಇನ್ನು ಮ್ಯಾಲೆ ನನ್ನತ್ತುಕೆ ನೀನು ಬಂದಿದ್ದ
ನೀನು ಮುಕ್ಸ ಮಾವ್ಸ ಮಡ್ಡಿಯನ್ನು
ಮರ್ರು ಬುಡು"[7]

ಮಾದೇಶ್ವರನು ಹೇಳುವ ಮಾತುಗಳನ್ನು ಗಮನಿಸಬೇಕು. ನಾನು ಬೇಟೆ ಆಡಲಾರೆ, ಮಾಂಸ

ತಿನ್ನಲಾರೆ ಹಾಗಾಗಿ ನನ್ನ ಹತ್ತಿರ ಇರುವ, ನನ್ನ ಶಿಶುಮಗನಾದ ನೀನು ಕೂಡ ಬೇಟೆಯನ್ನು ಮಾಡಬಾರದು, ಹಿಂಸೆಯನ್ನು ಮಾಡಬಾರದು, ಮಾಂಸವನ್ನು ತಿನ್ನಬಾರದು ಎಂದು ಹೇಳುತ್ತಾನೆ. ಬ್ಯಾಡರ ಕನ್ನಯ್ಯ ಕೂಡ ಅದನ್ನು ಅನುಸರಿಸುತ್ತಾನೆ. ಮಾದೇಶ್ವರ ಅಗ್ರಮಾನ್ಯ ಶಿಶುಮಗನಾಗುತ್ತಾನೆ.

ಹೀಗೆ ಸಂಪೂರ್ಣವಾಗಿ ಮಾದೇಶ್ವರ ತನ್ನ ಅನುಯಾಯಿಗಳನ್ನು, ಭಕ್ತರನ್ನು, ಒಕ್ಕಲುಗಳನ್ನು, ಶಿಶುಮಕ್ಕಳನ್ನು ಮಾನವೀಯತೆಯ ಕಕ್ಷೆಗೆ ತರುತ್ತಾನೆ. ಹೆಂಡತಿಗೆ ಕಾಟಕೊಡುವ ನೀಲಯ್ಯ, ಮುಂದಾಲೋಚನೆ ಇರದೆ ಹುತ್ತಕ್ಕೆ ಕೊಡಲಿ ಇಡುವ ಜುಂಜೇಗೌಡ ಅತಿಯಾಸೆಗೆ ಸಿಕ್ಕಿದ ಕಾಳಮ್ಮ, ಪರರನ್ನು ವಿಷವಿಕ್ಕಿ ಕೊಲ್ಲುವ ಇಕ್ಕೇರಿ ದೇವಮ್ಮ, ಇವರೆಲ್ಲರಿಗೂ ಮಾನವೀಯತೆಯನ್ನು ಕಲಿಸುತ್ತಾನೆ. ಸಮುದಾಯದ ಸಂಸ್ಕೃತಿಯಲ್ಲಿ ಸಾಂಸ್ಕೃತಿಕ ನೆಲೆಯಲ್ಲಿ ಮಾನವೀಯತೆ ಮುಖ್ಯವಾದದ್ದು ಎಂದು ಮಾದೇಶ್ವರ ಧೋರಣೆಗಳ ಮೂಲಕ ಖಚಿತವಾಗುತ್ತದೆ.

## ಅಡಿ ಟಿಪ್ಪಣಿಗಳು

1. ಸ್ವಾಮಿ ಬಿ.ಎಸ್. ಮಲೆಯ ಮಾದೇಶ್ವರ : ಒಂದು ಅಧ್ಯಯನ , ನವೀನ ಪ್ರಕಾಶನ, ಬೆಂಗಳೂರು ಮೊ.ಮು 1993 ಪುಟ 286
2. ಅದೇ ಪುಟ 287
3. ಅದೇ ಪುಟ 277
4. ಅದೇ ಪುಟ 277
5. ಅದೇ ಪುಟ - 278
6. ರಾಜಶೇಖರ ಪಿ.ಕೆ. (ಸಂ) ಮಲೆಯ ಮಾದೇಶ್ವರ ಸಂ-2, ಮು 2006 ಪುಟ - 454

# ಅಧ್ಯಾಯ - 4
# ಆರ್ಥಿಕ ವಿಕೇಂದ್ರೀಕರಣ

ಮನುಷ್ಯ ಸಮೂಹಜೀವಿಯಾಗಿ ಕೃಷಿಯೊಂದಿಗೆ ತನ್ನ ಬದುಕನ್ನು ಕಟ್ಟಿಕೊಂಡ ನಂತರ ಅವನು ತಾನು ಗಳಿಸಿದ್ದನ್ನು ಕ್ರೋಢೀಕರಿಸಲು ಶೇಖರಿಸಲು ಕಲಿತುಕೊಂಡ. ಹೀಗೆ ಪ್ರಾರಂಭವಾದ ಸಂಪತ್ತಿನ ಕ್ರೋಢೀಕರಣ ಮನಸ್ಥಿತಿ ಮನುಷ್ಯನ ಸಹಜ ಸ್ವಭಾವವಾಗುವಷ್ಟರ ಮಟ್ಟಿಗೆ ಬೆಳೆಯಿತು. ಹೀಗೆ ಬೆಳೆದ ಸ್ವಭಾವ ತಾನು ಗಳಿಸಿದ್ದನ್ನು ಕೂಡಿಡುವುದರ ಜೊತೆಗೆ ಬೇರೆಯವರು ದುಡಿದ ಸಂಪತ್ತು ಅಪಹರಿಸಲು ದೋಚಲು ಕಲಿತುಕೊಂಡ. ತನ್ನ ಸಂಪತ್ತು ಯಾರಿಂದ ಬಂದಿತು. ಅದರಲ್ಲಿ ಈ ಸಂಪತ್ತನ್ನು ನೀಡಿದವರಿಗೂ ಕನಿಷ್ಟ ಭಾಗವನ್ನೂ ನೀಡೋಣ ಎಂಬ ಮನಸ್ಸು ಇಲ್ಲವಾಯಿತು. ಸ್ವಾರ್ಥ ಅಧಿಕವಾಯಿತು. ಸಂಪತ್ತಿನ ಮದದಲ್ಲಿ ಅಂಧಕಾರವೇ ಕವಿಯಿತು. ಇಂದಿಗೂ ಕೂಡ ಆರ್ಥಿಕ ಕೇಂದ್ರೀಕರಣದಿಂದ ಅನೇಕ ದುಷ್ಪರಿಣಾಮಗಳು ಉಂಟಾಗುತ್ತಿವೆ. ಹೀಗೆ ಕ್ರೋಢೀಕರಣವಾದ ಸಂಪತ್ತಿನ ಕನಿಷ್ಟ ಭಾಗವಾದರೂ ಹಂಚಿಕೆಯಾಗಲಿ ಎಂಬುದು ಧಾರ್ಮಿಕ ನಾಯಕರ, ಸಮಾಜ ಸುಧಾರಕರ ಇರಾದೆ.

ಮೊದಲಿನಿಂದಲೂ ದೇವರ ಬಗ್ಗೆ ಧರ್ಮದ ಬಗ್ಗೆ ಜಾಗೃತಿ ಮೂಡಿಸಿರುವುದರಿಂದ ಮನುಷ್ಯ ಈ ವಿಷಯ ಬಂದಾಗ ದಾನ ನೀಡುತ್ತಾನೆ. "ದೇವಳು ಕೊಟ್ಟಾಗ ದಾನ! ಜೋಗಿ ಜಂಗಮ ಗುಡ್ಡರಿಗೆ ದಾನ ನೀಡಬೇಕು ಎಂದು ಸಾರಲೇ ಬೇವಿನಟ್ಟಿ ಕಾಳಿಯ ಕಥೆ ಹುಟ್ಟಿಕೊಂಡಿದೆ"[1] ಎಂದು ಡಾ|| ಬಿ.ಎಸ್. ಸ್ವಾಮಿಯವರು ಅಭಿಪ್ರಾಯಪಡುತ್ತಾರೆ. ಮಾದೇಶ್ವರ ಇಂತಹ ಸಂಪತ್ತು ಶೇಖರಿಸುವವರಿಗೆ ಹಂಚಿಕೆ ಮಾಡಬೇಕೆಂದು ಹೇಳುತ್ತಾನೆ. ಆದರೆ ಅವನ ಮಾತನ್ನು ಕೇಳದಿದ್ದರೆ ಸಂಪೂರ್ಣವಾಗಿ ನಾಶ ಮಾಡುತ್ತಾನೆ. ಇಲ್ಲಿ ಮಾದೇಶ್ವರ ನಡೆದುಕೊಳ್ಳುವ ಮತ್ತು ಹೇಳುವ ಬಗೆಯನ್ನು ನಾವು ಸಾಂಸ್ಕೃತಿಕ ಅಂಶಗಳ ಹಿನ್ನೆಲೆಯಲ್ಲಿ ಸಂಸ್ಕೃತಿಯನ್ನೂ ಗ್ರಹಿಸುವ ದೃಷ್ಟಿಕೋನದಲ್ಲಿ ಭಿನ್ನವಾಗಿ ವಿವರಿಸಬಹುದು. ಇದು ಕೇವಲ ದಾನದ ಪ್ರಶ್ನೆಯಾಗದೆ ಇಡೀ ಸಮುದಾಯದ ಅಥವ ಸಮಾಜದ ಸಂಪತ್ತಿನ ಕ್ರೋಢೀಕರಣವಾಗುತ್ತದೆ. ಸಮುದಾಯ ಸಮಾನವಾಗಿ ಹಂಚಿಕೊಳ್ಳಬೇಕಾಗದ ಸಮಾನವಾಗಿ ಅನುಭವಿಸಬೇಕಾದ ಸಂಪತ್ತನ್ನು ಕೇವಲ ಒಬ್ಬ ವ್ಯಕ್ತಿ ಶೇಖರಿಸಿದರೆ ಅದು ಅಪರಾಧ ಎಂದು ಮಾದೇಶ್ವರ ಭಾವಿಸುತ್ತಾನೆ. ಏಕೆಂದರೆ ಸಂಸ್ಕೃತಿಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಈ ಅರ್ಥವೇ ಬರುತ್ತದೆ. ಇಲ್ಲಿ ವಿಶೇಷವಾಗಿ ಒಂದು ಅಧ್ಯಾಯವನ್ನು ಅಂದರೆ ಬೇವಿನಟ್ಟಿ ಕಾಳಮ್ಮನ ಸಾಲನ್ನು ಪರಿಗಣಿಸಲಾಗಿದೆ. ಇಡೀ ಅಧ್ಯಾಯವನ್ನು ಪರಿಶೀಲಿಸಿದಾಗ ಬೇವಿನಟ್ಟಿ ಕಾಳಮ್ಮನ ಹರಮಾರಿತನ, ಗರ್ವ, ಸಂಪತ್ತಿನ ಶೇಖರಣೆ ಅದರ ಬಗೆಗೆ ಇರುವ ಅತಿಯಾಸೆ ಆಳುಗಳ ಶೋಷಣೆ, ಇವುಗಳ ಸ್ಪಷ್ಟ ಕಾಣುತ್ತವೆ.

ಮೂಲತಃ ಬೇವಿನಹಟ್ಟಿ ಕಾಳಮ್ಮ ಅತ್ಯಂತ ಬಡತನದಲ್ಲಿ ಇದ್ದವಳು ಅವಳ ಪರಿಸ್ಥಿತಿಯನ್ನು ಕಾವ್ಯ ಅತ್ಯಂತ ಪರಿಣಾಮಕಾರಿಯಾಗಿ ವಿವರಿಸುತ್ತದೆ.

"ಬೇವಿನ್ನಟ್ಟಿ ಕಾಳಮ್ಮ ಅನ್ತಕ್ಕವ
ಜಾತೀವೊಳಗೆ ಹಾಲ್ಮತ್ರ
ಕುಲದಲ್ಲಿ ಕುರುಬ್‌ಗೌಡ ಕೆಂಡಪ್ಪ
ಕೆಂಡಪ್ಪನ ಮಡ್ಡಿ ಬೇವುನ್ನಾಳಮ್ಮ
ಅವುಳ್ಗೆ ತುಂಬಾ ಬಡ್ತಾನ
ಅವ ಕಳ್ಳೀಗುದ್ಗೆ ಕುಲೂರ್‍ಕೊಂಡು
ಪರಚುಪುಟ್ಟಿ ಕಂಕ್ಳಲಿರೀಕೊಂಡು
ಅವ ಬೆರಣಿ ತಟ್ಟಿದ್ದ
ಉಣ್ಣಲು ಅನ್ನವಿಲ್ಲ ಉಡಲು ಬಟ್ಟೆಯಿಲ್ಲ
ಓಣೆಮ್ಯಾಗಲಬಟ್ಟೆ ಒಬ್ಬೆಮ್ಯಾಗಳ ಬಟ್ಟೆ ಆಯ್ಕೊಂಡ್ಬಂದು
ಜಾಲುದ್ ಕೊಳದಲ್ಲಿ ಚೆನ್ನಾಗಿ ಜಾಲುಸ್ತಿದ್ದ
ಒಡಾಳೆಯನ್ನು ತಕಂಬಂದು
ನೀರ್ಗೆ ಉನೀಹಾಕ್ಬುಟ್ಟು ನಡೀಗೆ ಸುತ್ಕೊತಿದ್ದ
ತಿಪ್ಪೇಮ್ಯಾಲೆ ಬಿದ್ದಿರುವಂತಾ ಹಳೇ ಕಂಬ್ಳಿ ತಂದು
ಹೆಗುಲ್ ಮ್ಯಾಲಾಕೂತಿದ್ದ"[1]

ಹೀಗೆ ಕಾವ್ಯ ಬೇವಿನಟ್ಟಿ ಕಾಳಮ್ಮನ ಬಡತನವನ್ನು ಹೇಳುತ್ತದೆ. ತಿನ್ನಲು ಆಹಾರ, ಉಡಲು ಬಟ್ಟೆ ಇಲ್ಲದಂತಹ ಸ್ಥಿತಿ ಅವಳದು ಗಂಡ ಕೆಂಡಪ್ಪ ಬೆರಣಿಯನ್ನು ತಟ್ಟಿ ಅದನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಚಿಂದಿ ಬಟ್ಟೆಯನ್ನು ತಂದು ಅದನ್ನು ಹೊಲೆದುಕೊಂಡು ಇಟ್ಟುಕೊಳ್ಳುತ್ತಿದ್ದರು. ಕಾಳಮ್ಮ ಹುಲ್ಲನ್ನು ಕೊಯ್ದುಕೊಂಡು ಅದನ್ನು ನೆತ್ತೀಮ್ಯಾಲೆ ಹೊತ್ತುಕೊಂಡು ಬೀದಿ ಬೀದಿಗಳಲ್ಲಿ ತಿರುಗಿ ಮಾರುತ್ತಿದ್ದಳು. ಬಂದ ಒಂದಾಣೆಗೆ ಗಂಡ ಹಿಂಡಿರಿಬ್ಬರೂ ಎಲೆ ಅಡಿಕೆಯನ್ನು ತಂದು ಹಾಕಿಕೊಳ್ಳುತ್ತಿದ್ದರು. ಅರ್ಕದ ಅಕ್ಕಿಯನ್ನು ತಂದು ಹಂಬಲಿಯನ್ನು ಕಾಯಿಸಿ ಕುಡಿಯುತ್ತಿದ್ದರು. ಎರಡು ಕಾಸಿಗೆ ಹುರುಳಿ ತಂದು ಅದನ್ನು ಚಳಿಯಾದಾಗ ಹುರಿದು ತಿನ್ನುತ್ತಿದ್ದರು.

ಹೀಗೆ ಅತ್ಯಂತ ಕನಿಷ್ಠ ಮೂಲಭೂತ ಅವಶ್ಯಕ ವಸ್ತುಗಳೂ ಇಲ್ಲದೆ, ಅತ್ಯಂತ ದಯನೀಯ ಜೀವನ ನಡೆಸುತ್ತಿದ್ದರು. ಒಂದುಸೊಪ್ಪಿನ ಗುಡಿಸಲಿನಲ್ಲಿದ್ದರು. ಹೀಗಿದ್ದಾಗ ಮಾದೇಶ್ವರರು ಕುಂತೂರು ಮಠವನ್ನು ಬಿಟ್ಟು ಬರುವಾಗ ಅವನಿಗೆ ಕಾಳಮ್ಮ ಮತ್ತು ಗಂಡ ತಮಗೆ ಭಾಗ್ಯಕೊಡುವಂತೆ ಅಂಗಲಾಚುತ್ತಾರೆ. ಇದನ್ನು ಮಾದೇಶ್ವರನ ಮಾತಿನಲ್ಲೇ ನೋಡುವುದಾದರೆ ಅದರ ವಾಸ್ತವತೆಯ ಅರಿವು ನಮಗಾಗುತ್ತದೆ.

"ಸರ್ರಾತ್ರೆ ಹೊತ್ತಲ್ಲ ನನಕಂದ
ನಾನು ಬರುವಂತಾ ಹಾದೀಲಿ
ಗಂಡಹೆಂಡ್ತೀರಿಬ್ರು ತರುಬರ್‍ನೆ ಬಂದು ನನ್ನ ಪಾದ ಹಿಡ್ಕೊಂಡ್ರು
ನಮ್ಗೆ ಭಾಗ್ಯ ಕೊಡಿ ಅಂತ ಕೇಳ್ಕೊಂಡ್ರು"[2]

ಕಾಳಮ್ಮ ರಾತ್ರಿಯೆಲ್ಲ ನಿದ್ದೆಯನ್ನು ಕೂಡ ಸರಿಯಾಗಿ ಮಾಡುತ್ತಿರಲಿಲ್ಲ. ಏಕೆಂದರೆ ಅವಳಿಗೆ ಯಾವಾಗಲೂ ಬಡತನದ ಚಿಂತೆ ಕಾಡುತ್ತಿತ್ತು. ಮಾದೇಶ್ವರನನ್ನು ಕೇಳಿದಾಗ ಅವನು ಭಾಗ್ಯ ಕೊಡುವುದಾಗಿ ಹೇಳುತ್ತಾನೆ. ಮೇಲಿನ ಸಾಲುಗಳಲ್ಲಿರುವ 'ತರುಬರ್ನೆ ಬಂದು ಪಾದ ಹಿಡ್ಕೊಂಡ್ರು' ಎನ್ನುವ ಮಾತುಗಳ್ಲಲಿನ ತೀವ್ರತೆ ಶ್ರೀಮಂತಿಕೆಯನ್ನು ಪಡೆಯಬೇಕೆಂಬ ಹಂಬಲ, ಆದರ ಬಡತನದ ಹತಾಶ ಭಾವ ಮೊದಲಾದವು ಮಡುಗಟ್ಟಿ ನಿಂತಿವೆ. ಅವರು ಯಾರಕಾಲನ್ನು ಬೇಕಾದರೂ ಹಿಡಿದುಕೊಳ್ಳುವರು, ಅವರಿಗೆ ಬೇಕಾಗಿರುವುದು ಸಂಪತ್ತು, ಮಾದೇಶ್ವರ ತನ್ನ ಬೆಟ್ಟಕ್ಕೆ ಹನ್ನೆರಡು ತಿಂಗಳು ಬಂದು ಧೂಪದ ಸೇವೆ ಮಾಡಿದರೆ ಭಾಗ್ಯ ಕೊಡುವುದಾಗಿ ಹೇಳುತ್ತಾನೆ. ಅದಕ್ಕೆ ಒಪ್ಪಿ ಕಾಳಮ್ಮ ಮತ್ತು ಕೆಂಡಪ್ಪ ಇಬ್ಬರೂ ಬೆಟ್ಟಕ್ಕೆ ಪ್ರತಿ ತಿಂಗಳೂ ಹೋಗುತ್ತಾರೆ. ನಂತರ ಕಾಳಮ್ಮ ಹನ್ನೆರಡೂ ತಿಂಗಳೂ ಬಂದು ಸೇವೆ ಮಾಡಿದ್ದೇನೆ. ಭಾಗ್ಯವನ್ನು ಕೊಡು ಎನ್ನುತ್ತಾಳೆ. ಆಗ ಮಾದೇಶ್ವರ ಅವಳ ಸೊಪ್ಪಿನ ಗುಡಿಸಲಿನಲ್ಲಿಯೇ ಏಳು ಕೊಪ್ಪುಗೆ ಐಶ್ವರ್ಯ ಅವಳಿಗೆ ನೀಡುತ್ತಾನೆ. ಕಾಳಮ್ಮ ಮಾದೇಶ್ವರ ಕೊಟ್ಟಿರುವ ಹಣವನ್ನು ಸಂಪತ್ತನ್ನೂ ಉಳಿಸಿಕೊಳ್ಳಬೇಕೆಂಬುದಾಗಿ ನಿರ್ಧರಿಸುತ್ತಾಳೆ. ಕಾಳಮ್ಮ ಅತ್ಯಂತ ಐಶ್ವರ್ಯವನ್ನೂ ಹೊಂದಿರುತ್ತಾಳೆ. ಅಂದರೆ ಅದರ ಸಾಂದ್ರತೆಯನ್ನು ಸ್ವತಃ ಮಾದೇಶ್ವರನೇ ಬೇಡರ ಕನ್ನಯ್ಯನಿಗೆ ವಿವರಿಸುತ್ತಾನೆ.

"ಏಳಟ್ಟಿ ದನಾ ಕಟ್ಟಿದ್ದಾಳೆ
ಏಳಟ್ಟಿ ಕುರಿ ಕಟ್ಟಿದ್ದಾಳೆ
ಅರ್ಮನೆ ಮೇಲೆ ಅಪ್ರಂಜಿ ಕಳ್ಸ ಮಡುಗುಸ್ಕೊಂಡಿದ್ದಾಳೆ
ದನಾ ಕಟ್ಟಾಕಬೇಕಾದ್ರೆ ಚಿನ್ನದಗುಂಟ
ಎಮ್ಮೆ ಕಟ್ಟಾಕ್ಬೇಕಾದ್ರೆ ಬೆರಳಿಗುಂಟ
ದನಾ ಕರ ಕುರಿ ಕುಡೀ ಬೇಕಾದ್ರೆ ಚಿನ್ನದ ಬಾನಿ
ಒರಗದು ಮುತ್ತುನ ಮಂಚ
ಪಾದ ತೊಳೆಯದು ಪಚ್ಚೆಕಲ್ಲು
ಮುತ್ತುನಲ್ಲಿ ಮುಂಬಾಗ್ಲು ಹವುಳ್ದಲ್ಲಿ ಹರುಗ್ವಾಡೆ
ಬೇವುನ್ನಟ್ಟಿ ಕಾಳಮ್ಮ
ಸಿರಿ ಸಂಪತ್ತಲ್ಲಿ ಒರಗವುಳೆ"[3]

ಅಂದರೆ ಅವಳ ಜೀವನದ ವೈಭವ, ಅತಿ ಶ್ರೀಮಂತಿಕೆ, ಸಂಪತ್ತಿನ ಸಂಗ್ರಹ ಇವು ತಿಳಿಯುತ್ತವೆ. ಎಮ್ಮೆ ದನಗಳನ್ನು ಕಟ್ಟುವುದು ಚಿನ್ನ ಬೆಳ್ಳಿ ಗೂಟದಲ್ಲಿ ಅವಳು ಮಲಗುವುದು ಮುತ್ತಿನ ಮಂಚ, ಪಾದವನ್ನು ತೊಳೆಯಲು ಪಚ್ಚೆಯ ಕಲ್ಲು. ಅಂದರೆ ಕೆಲವು ಸಾಮಾನ್ಯರು ತಮ್ಮ ಜೀವನದಲ್ಲೂ ನೋಡಲಾರದ ವಿಶೇಷವಾದ ಅಪರೂಪವಾದ ದುಬಾರಿಯಾದ ವಸ್ತುಗಳು ಅವಳ ಮನೆಯ ತುಂಬೆಲ್ಲ ತುಂಬಿದ್ದವು. ಅವುಗಳನ್ನು ಅತ್ಯಂತ ಸಾಮಾನ್ಯ ವಸ್ತುಗಳಂತೆ ಬಳಸತ್ತಿದ್ದಳು. ಅವುಗಳ ಬೆಲೆಯೇ ಸಾಮಾನ್ಯರಿಗೆ ಎಟುಕದಂತಿರುವುದು. ಆದರೆ ಕಾಳಮ್ಮನಿಗೆ ಅಷ್ಟು ಸಂಪತ್ತು ಇತ್ತು. ಎಪ್ಪತ್ತೇಳು ಸಾವಿರ ಕಂಡುಗ ಎಳ್ಳನ್ನು ಬೆಳೆದು ಕಣದಲ್ಲಿ ರಾಶಿಯನ್ನು ಹಾಕಿ ಅದಕ್ಕೆ ಚಿನ್ನದ ಮತ್ತು ಬೆಳ್ಳಿಯ ಮೆರ್ಕಡ್ಡಿಯನ್ನು ನೆಟ್ಟಿದ್ದಾಳೆ. ತನ್ನಲ್ಲಿರುವ ಸಂಪತ್ತನ್ನು ರಕ್ಷಿಸಿಕೊಳ್ಳಲು

ಕಾಳಮ್ಮ ವಿಶೇಷ ರಕ್ಷಣಾ ವಿಧಾನಗಳನ್ನು ಅಳವಡಿಸಿಕೊಂಡಿದ್ದಾಳೆ. ಎಳ್ಳಿನ ಕಣದ ಮುಂದೆ ಒಂದು ಬೇವಿನ ಮರವನ್ನು ಬೆಳೆಸಿ ಅದಕ್ಕೆ ಕಾಳ್ನಾಯಿ ಕೆಂದ್ನಾಯಿ ಚುಂಚ್ನಾಯಿಗಳನ್ನು ಕಟ್ಟಿದ್ದಾಳೆ. ತನ್ನ ಮನೆಗೆ ಭಿಕ್ಷೆ ಕೇಳಲು ಯಾರಾದರೂ ಬರುತ್ತಾರೆ ಎಂದು ಅತ್ಯಂತ ಕಠಿಣ ವ್ಯವಸ್ಥೆಗಳನ್ನು ಮಾಡಿದ್ದಾಳೆ. ದಾಸ, ದೊಂಬ, ಬುಡಬುಡಕಿ, ಕಾಳಾಮುಖಿ, ಸನ್ಯಾಸಿಗಳು ಯಾರೂ ಬರದಂತೆ.

"ಕಬ್ಬಾನಾಯ ಮನೇ ಮುಂದಾರ್ದಲ್ಲಿ ಪಾರಾ ಇಟ್ಟಿದ್ದಾಳೆ
ತಿಮಿಯೋ ಚೂಜುಗೊಂಬುನ ಬೀಜುದ್ದೋರಿಯನ್ನು
ತಿಮಿಯದ್ಕೆ ಬಾಗ್ಲಲ್ಲಿ ಕಟ್ಟಿದ್ದಾಳೆ
ಪೀಠ ಫಿರಂಗಿ ಬಂದೂಕನ್ನು ಕೊಟ್ಟು
ಗೊಲ್ಲಣ್ಣದೀರ ಕಾವ್ಲಿಟ್ಟಿದ್ದಾಳೆ
ದಾವತ್ತೊದರಿಗೆ ಬಂದ್ ಗುಟಕ್ ನೀರ್ ಕೊಡಲ್ಲ
ಹಸ್ತೋದೋರ್ಗೆ ಒಂದುತ್ತಿಟ್ಟಿಕ್ಕಲ್ಲ
ನಮ್ಮಂತ ಭಿಕ್ಷುಕರ ಕಂಡ್ರೆ
ಅಟ್ನಾಡ್ಕೊಂಡ್ ಬತ್ತಳಲ್ಲ"[4]

ಮಾದೇಶ್ವರನು ಬೇಡರ ಕನ್ನಯ್ಯನಿಗೆ ತನ್ನ ಒಕ್ಕಲಾದ ತನ್ನಿಂದಲೇ ಶ್ರೀಮಂತಳಾದ ಬೇವನಟ್ಟಿ ಕಾಳಮ್ಮನ ಮನೆಗೆ ಹೋಗಿ ಮಜ್ಜಣಕ್ಕೆ ಎಳ್ಳನ್ನು ತರಲು ಹೇಳುತ್ತಾನೆ. ಆದರೆ ಅವಳ ಮನ್ನಸು ಮತ್ತು ಅವಳು ತನ್ನ ಮನೆಗೆ ಮಾಡಿಕೊಂಡಿರುವ ವ್ಯವಸ್ಥೆಯ ಬಗ್ಗೆ ಕನ್ನಯ್ಯ ಮಾದೇಶ್ವರನಿಗೆ ವಿವರಿಸುತ್ತಾನೆ. ಜೋಳಿಗೆಯನ್ನು ಹಿಡಿದು ಮನೆ ಬಾಗಿಲಿಗೆ ಹೋಗುವಂತೆಯೇ ಇಲ್ಲ ಬಾಗಿಲಿನಲ್ಲೇ ಚೂಜುಗೊಂಬಿನ ಬೀಜದ್ದೋರಿ ಹೋದವರಿಗೆ ತಿವಿಯುತ್ತದೆ. ಅವಳ ಮನೆಯ ಕಾವಲುಗಾರರಿಗೆ ಬಂದೂಕನ್ನು ನೀಡಿ ಸಿದ್ಧತೆಯಲ್ಲಿರಿಸಿದ್ದಾಳೆ. ಇಂದಿನ ಅತ್ಯಂತ ಶ್ರೀಮಂತರು ತಮ್ಮ ಮನೆಗೆ ಭದ್ರತಾ ಸಿಬ್ಬಂದಿಯನ್ನು ನೇಮಿಸಿಕೊಂಡಂತೆ ಕಾಳಮ್ಮ ಕೂಡ ಸಂಪತ್ತಿನ ರಕ್ಷಣೆಗೆ ಮತ್ತು ಭಿಕ್ಷೆ ನೀಡಿದರೆ ತನ್ನ ಸಂಪತ್ತಿನ ಅಷ್ಟು ಕಡಿಮೆಯಾಗುತ್ತದೆ ಎಂದು ಸನ್ಯಾಸಿ ಜಂಗಮರನ್ನು ಎದುರಿಸಲು ಗೊಲ್ಲಣ್ಣದಿರನ್ನು ನೇಮಿಸಿರುತ್ತಾಳೆ. ಆದರೆ ಈ ಎಲ್ಲ ಬೆಳವಣಿಗೆಯನ್ನು ನೋಡಿ ಮಾದೇಶ್ವರ ಸ್ವತಃ ತಾನೇ ಹೋದರೆ ಕಾಳಮ್ಮ ತನ್ನನ್ನು ಗುರುತಿಸಿ ಗೌರವಿಸಬಹುದು, ಭಿಕ್ಷೆ ನೀಡಬಹುದು ತನ್ನ ಒಕ್ಕಲಾಗಬಹುದು ಎಂದು ತಿಳಿದು ಅವಳ ಮನೆಗೆ ಭಿಕ್ಷೆಗೆ ಹೋಗುತ್ತಾನೆ.

ಕಾಳಮ್ಮ ಅತ್ಯಂತ ಶ್ರೀಮಂತಳಾಗಿ ಆದರೆ ಜೀನಳಾಗಿ ಜೀವನ ನಡೆಸುತ್ತಿರುತ್ತಾಳೆ. ಒಮ್ಮೆ ಎಳ್ಳನ್ನು ಬೆಳೆದು ಕಣದಲ್ಲಿ ರಾಸಿಹಾಕಿದ ನಂತರ ಮನೆಗೆ ಬರುತ್ತಾಳೆ. ಮನೆಗೆ ಬಂದಾಗ ಸೊಸೆಯರೆಲ್ಲರೂ ಅತ್ತೆಯ ಶಬ್ದವಾಗುತ್ತಲೆ ಅತ್ಯಂತ ಅವಸರದಲ್ಲಿ ಮೇಲಕ್ಕೆದ್ದು ನೀರನ್ನು ತಂದು ಅತ್ತೆಯ ಪಾದವನ್ನು ತೊಳೆಯುತ್ತಾರೆ. ನಂತರ ಪಟ್ಟೆಮಂಚದ ಮೇಲೆ ಒರಗುತ್ತಾಳೆ. ಆಗ ದನಕರುಗಳನ್ನು ನೀರನ್ನು ಕುಡಿಯುವುದಕ್ಕೆ ಮಾಡಿರುವ ಕಂಚಿನ ದೋಣಿಯಲ್ಲಿ ಗುಮಚಕ್ಕೆ ಬಂದು ನೀರನ್ನು ಕುಡಿಯುತ್ತಿರುತ್ತದೆ. ಆಗ ಕಾಳಮ್ಮ ಈ ರೀತಿ ಪ್ರತಿಕ್ರಿಯಿಸುತ್ತಾಳೆ.

"ಎಲಾ ಎಲಾ ಮುಂಡೇಮಗುನ ಗುಮಚಕ್ಕೆ
ಕಂಚುನ ದೋಣೇಲಿರೋ ಕಲ್ಗುಗ್ ಕುಡಿತೀಯ ಅಂತ್ವೇಳಿ
ತನ್ನ ಹಿರೀಸೊಸೆ ದ್ಯಾವಾಜಿಯನ್ನು ಕೂಗಿ ಕರ್ದ
ಎಲಾ ದ್ಯಾವಾಜಿ
ಕಂಚುನ ದೋಣಿ ಮುಚುಣ್ಗೆ ಹಾಕಿಲ್ಲವಲ್ಲ ಗರ್ತಿ
ಕಾಗೆ ಬತ್ತವೆ ಗೂಗೆ ಬತ್ತವೆ
ಗುಬ್ಬಿ ಬತ್ತವೆ ಗುಟ್ಟುಕ್ಕಿ ಬತ್ತವೆ
ಕಂಚುನ ದೋಣಿ ನೀರ್ನೆಲ್ಲ ಕುಡ್ಕೊತವೆ
ಹೊಟ್ಟೆಲ್ಲಾನೂ ತಿನ್ನತವೆ
ನನ್ನ ದನಾಕರೀಗೆ ನೀರಿಲ್ಲುದಂಗಾಯ್ತದೆ"[5]

ಈ ಸನ್ನಿವೇಶವನ್ನು ನೋಡಿದಾಗ ಅವಳ ಅತಿಯಾಸೆ ಮತ್ತು ಜಿಪುಣತನದ ಬಗ್ಗೆ ತಿಳಿಯುತ್ತದೆ. ಅತ್ಯಂತ ಪುಟ್ಟ ಪಕ್ಷಿಯೊಂದು ನೀರನ್ನು ಕುಡಿದರೆ ಸಹಿಸುವ ವ್ಯವಧಾನವೂ ಕಾಳಮ್ಮನಿಗೆ ಇಲ್ಲ. ತನ್ನ ಸಂಪತ್ತು ಅಷ್ಟು ಪ್ರಮಾಣದಲ್ಲಿ ಬೇರೆಯವರಿಗೆ ಹೋಯಿತು ಎಂದು ಭಾವಿಸುತ್ತಾಳೆ. ಪ್ರತಿರೋಧಿಸುತ್ತಾಳೆ. ಪಕ್ಷಿಗಳು ಬಂದು ದನಕರುಗಳಿಗೆಂದಿರುವ ನೀರನ್ನು ಕುಡಿದರೆ ಖಂಡಿತ ನಷ್ಟವಾಗುವುದಿಲ್ಲ. ಆದರೆ ಅದರ ತಿಳುವಳಿಕೆ ಕಾಳಮ್ಮನಿಗೆ ಇಲ್ಲ. ಬದಲಾಗಿ ತನ್ನ ಸಂಪತ್ತಾದ ತನ್ನ ಕೊಟ್ಟಿಗೆಯಲ್ಲೇ ಒಂದು ಹಕ್ಕಿ ಬಂದು ನೀರನ್ನು ಕುಡಿಯುವುದು ಅವಳಿಗೆ ಸಹಿಸಲಾರದ ಸಂಗತಿ. ಅಷ್ಟು ಪ್ರಮಾಣದಲ್ಲಿ ತನ್ನ ಸಂಪತ್ತು ಕಳೆದುಕೊಂಡೆ ಎಂದು ಭಾವಿಸುತ್ತಾಳೆ. ತನ್ನ ಹೀರೀಸೊಸೆ ದ್ಯಾವಾಜಮ್ಮನನ್ನು ಕರೆದು ಕಾಗೆ, ಗೂಬೆ, ಗುಟ್ಟುಕ್ಕಿ, ಗುಬ್ಬಿ, ಬರುತ್ತವೆ. ದೋಣಿ ನೀರೆಲ್ಲವನ್ನು ಕುಡಿಯುತ್ತದೆ, ಅವು ಬರದಂತೆ ಮಾಡು ಎನ್ನುತ್ತಾಳೆ. ದ್ಯಾವಾಜಮ್ಮ ಅತ್ತೆ ಕರೆದ ತಕ್ಷಣ ಅಲ್ಲಿಗೆ ಹೋಗುತ್ತಾಳೆ. ಹಕ್ಕಿ ಪಕ್ಷಿಗಳ ಶಾಪ ತಗುಲಿದರೆ ಮನೆಗೆ ಕಷ್ಟ ಬರುತ್ತದೆ ಎಂದು ತಿಳಿದು ಅತ್ತೆಗೆ ವಿಷಯ ತಿಳಿಸುತ್ತಾಳೆ. ಆದರೆ ಕಾಳಮ್ಮ ಅವಳ ಮಾತನ್ನು ಒಪ್ಪದೆ ಅವಳನ್ನು ಹೀನಾಮಾನ ಬಯ್ಯುತ್ತಾಳೆ.

"ಎಲಾ ಎಲಾ ಕೆಟ್ಟದ್ಗಿ ಮಗ್ಳೆ
ನಿಮ್ಮಪ್ಪನಟ್ಟಿ ಏನಾದ್ರೂ ಹಾಳಾಗಬೇಕಿತ್ತ
ನನ್ಮನೆ ತಾನೆ ಹಾಳಾಗೋದು
ಗುಮ್ಮಕ್ಕಿ ಬರುದಂಗೆ ಮಾಡದುಹ್ಯಾಂಗೆ ಅನ್ನೋದನ್ನ
ಬುದ್ಧ್ಯ ನಾನ್ವೇಳ್ಕೊಡ್ತಿನಿ ಕೇಳು
ನನ್ನ ಮನೆ ಮ್ಯಾಲೆಲ್ಲ
ಒಂದು ಮಂಜಿನ ಬಲೆಯ ಬೀಸು"[6]

ತನ್ನ ಸೊಸೆಯ ಮಾತಿಗೆ ಕಾಳಮ್ಮ ನೀಡಿದ ಉತ್ತರ ಇದು. ತನ್ನ ಮನೆ ಹಾಳಾಗುತ್ತದೆ. ನಿಮ್ಮಪ್ಪನ ಮನೆ ಹಾಳಾಗೋದಿಲ್ಲ ಎಂದು ಹೇಳುತ್ತಾಳೆ. ಗುಮ್ಮಕ್ಕಿ ಬರದಂತೆ ಮಂಜಿನ ಬಲೆ ಬೀಸುತ್ತಾಳೆ. ಇಲ್ಲಿಗೆ ಕಾವ್ಯ ಅವಳ ಜಿಪುಣತನದ ಹಲವು ಮುಖಗಳಲ್ಲಿ ಒಂದು ಮುಖವನ್ನು ಪರಿಚಯಿಸುತ್ತದೆ.

ಮಾದೇಶ್ವರ ಸಂಪತ್ತನ್ನು ನೀಡುವ ಮೊದಲು ಬಡವಳಾಗಿದ್ದ ಕಾಳಮ್ಮ ಸಹಜವಾಗಿಯೇ ತಿನ್ನಲು ಆಹಾರವಿಲ್ಲದೆ ಸೊರಗಿರುತ್ತಾಳೆ. ಆದರೆ ಮಾದೇಶ್ವರನು ಸಂಪತ್ತನ್ನು ಶ್ರೀಮಂತಿಕೆಯನ್ನೂ ನೀಡಿದ ಮೇಲೆ ಅವಳು ಅತ್ಯಂತ ದಡೂತಿ ದೇಹವನ್ನು ಹೊಂದುತ್ತಾಳೆ. ಕಾವ್ಯವೇ ವಿವರಿಸುವಂತೆ ಅವಳು ಇಪ್ಪತ್ತು ಗಜದ ರವುಕ್ಕೆ, ಅರವತ್ತಾರು ಮೊಳದ ಸೀರೆ ಉಡುತ್ತಿದ್ದಳು. ಅವಳ ಹೊಟ್ಟೆ ಬಂದು ತೊಡೆ ಮೇಲೆ ಕುಳಿತುಕೊಳ್ಳುವುದು. ಅವಳು ಸ್ವತಃ ಮೇಲೇಳಲಾರಳು. ಎದ್ದರೆ ಕುಳಿತುಕೊಳ್ಳಲಾರಳು. ಎರಡೂ ಕೈಗಳನ್ನು ಊರಿಕೊಂಡು ಏಳುವಾಗ ಮಾಡೇಗಾತ್ರದ ತೋಳು ಮುಂಗೈಗೆ ಚಾಚುತ್ತವೆ. ಅಂದರೆ ಅಷ್ಟು ಶ್ರೀಮಂತಳಾಗಿ ನೆಮ್ಮದಿಯಾಗಿ ಜಿಪುಣತನದಿಂದ ಕೂಡಿಟ್ಟು ಇಷ್ಟು ದೊಡ್ಡದೇಹವನ್ನು ಬೆಳೆಸಿಕೊಂಡಿದ್ದಾಳೆ. ಅವಳು ಎದ್ದು ಬರುತ್ತಿದ್ದರೆ ಸೊಸೆಯರು ಬಾಗಲಿ ಮೂಲೆಗೆ ಹೋಗುವರು ಅಂದರೆ ಅಷ್ಟು ಭಯವನ್ನು ಹೊಂದಿದ್ದರು. ಬೇವಿನ ಕಾಳಮ್ಮ ಕೊಡುವ ಶಿಕ್ಷೆ ಅಷ್ಟು ಕ್ರೂರವಾಗಿದ್ದವು. ಕಾಳಮ್ಮ ಹೇಳಿದ ಅಡುಗೆಯನ್ನು ಸೊಸೆಯರು ಮಾಡಬೇಕಿತ್ತು. ಹಿರಿಸೊಸೆ ದ್ಯಾವಾಜಮ್ಮ ಯಾವ ಅಡುಗೆಯನ್ನು ಮಾಡಬೇಕೆಂದು ಕೇಳುತ್ತಾಳೆ. ಆಗ ಬೇವಿನ ಕಾಳಮ್ಮ ಹೇಳುವ ಮಾತು ಅವಳ ಜಿಪುಣತನದ ತೀವ್ರತೆಯನ್ನು ಉತ್ಕಟತೆಯನ್ನು ತಿಳಿಸುತ್ತದೆ.

"ಹಾಲು ಅನ್ನ ಪಾಲು ಪರಸಾದಗಳು ಬೇಕಾಗಿಲ್ಲ
ಸಣ್ಣಕ್ಕಿ ಸಣ್‌ಬ್ಯಾಳೆ ರಾಯುದ್ಬುಡಿ ಸಕ್ರೆ ಅಚ್ಚಿಮ್ಮೆ ನೊರಾಲೂಟ ಮಾಡ್ತಿದ್ರೆ
ಮನೇಲಿರುವಂತಾ ಭಕ್ಷ ಭಂಡಾರವೆಲ್ಲ ಕರುಗೋಗ್ತಾ ಇದ್ದಾದೆ
ನಾನ್‌ನೋಡುದ್ರೆ ಕೆಟ್ಟು ಬಾಳ್ದೋಳು
ಅಂತಾ ದೊಡ್ಮೋಡಿ ನಂಗೆ ಬೇಕಾಗಿಲ್ಲ
ಅಮ್ಮಿ ಹಾಲು ಅನ್ನ ಪಾಲು ಪರ್ಸಾದ
ಹುಳಿಯನ್ನ ಬೆಳೆಯನ್ನ ಉಂಡು
ಇಷ್ಟು ಬದುಕು ಸಂಪಾದ್ನೆ ಮಾಡೋದಾಯ್ತು?
ಇಲ್ಲಿಂದೀಚೆಗೆ ಅಂಬ್ಲಿ ಕಾಯಿ
ಇನ್ನೂ ಅಂಬ್ಲಿ ಕುಡುದ್ರೆ ಎಷ್ಟು ಸಂಪಾದ್ನೆ ಆದದೋ"[6]

ನಿಜಕ್ಕೂ ಈ ಬಗೆಯ ಮಾತುಗಳು ದಂಗುಬಡಿಸುವಂತಹದ್ದು. ಒಂದು ಕಾಲದಲ್ಲಿ ಹೊಟ್ಟೆ ಏನೂ ಇಲ್ಲದೆ, ಸಿಕ್ಕರೆ ಅಂಬ್ಲಿ ಇಲ್ಲವೆ ಕೇವಲ ಸೊಪ್ಪನ್ನು ಮಾತ್ರ ಬೇಯಿಸಿಕೊಂಡು ತಿನ್ನುತ್ತಿದ್ದಳು. ಆದರೆ ಈಗ ಮಾದೇಶ್ವರ ಸಂಪತ್ತು ನೀಡಿದಾಗಲೂ ಅಂಬಲಿ ಕಾಯಿಸಿ ಎನ್ನುತ್ತಾಳೆ. ಅಂದರೆ ಇಲ್ಲಿಯವರೆಗೆ ಹಾಲು ಅನ್ನ ಉಂಡು ಇಷ್ಟು ಸಂಪಾದನೆ ಮಾಡಿದ್ದೀನಿ ಅನ್ನುವ ಮಾತಿನಲ್ಲಿಯೇ ಹಾಲು ಅನ್ನ ಉಣ್ಣದಿದ್ದರೆ ಇನ್ನೂ ಸಂಪತ್ತು ಹೆಚ್ಚಿರುತ್ತಿತ್ತು ಎಂದುಕೊಳ್ಳುತ್ತಾಳೆ. ಆದ್ದರಿಂದ ಇನ್ನು ಮುಂದೆ ಹಾಲು ಅನ್ನವನ್ನು ಸಂಪೂರ್ಣವಾಗಿ ನಿಲ್ಲಿಸಿ ಅತ್ಯಂತ ಬಡವರು ಯಾವ ರೀತಿ ಜೀವಿಸುತ್ತಾರೋ ಅದೇ ರೀತಿ ಜೀವಿಸಿ ಅಂದರೆ ಆಹಾರ ಪದ್ಧತಿ ಬದಲಾಯಿಸಿ ಅಂಬಲಿಯನ್ನು ಮಾತ್ರ ಕುಡಿದು ಸಂಪತ್ತನ್ನು ಇನ್ನಷ್ಟು ಉಳಿಸಬೇಕು ಕೂಡಿಸಬೇಕು ಎನ್ನುತ್ತಾಳೆ. ಆಗ ಸೊಸೆಯಾದ ದ್ಯಾವಾಜಮ್ಮ ಒಂದು ಕೊಪ್ಪರಿಗೆ ನೀರನ್ನು ಹಾಕಿ ಅಂಬಲಿಯನ್ನು ಕಾಯಿಸುತ್ತಾಳೆ. ಅದನ್ನು ತಂದು ಅತ್ತೆ ಕಾಳಮ್ಮನಿಗೂ ಕೊಡುತ್ತಾಳೆ. ಅತ್ಯಂತ ಬಿಸಿಯಾಗಿದೆ ಎಂದು ಕಾಳಮ್ಮ ಕುಳಿತಿದ್ದಳು.

ಆಗ ಒಂದು ನೊಣ ಬಂದು ಅಂಬಲಿ ಒಳಗೆ ಬೀಳುತ್ತದೆ. ಅದರ ರೆಕ್ಕೆಗೆಲ್ಲ ಅಂಬಲಿ ಮೆತ್ತಿಕೊಂಡಿರುತ್ತದೆ. ಆಗ ಕಾಳಮ್ಮ ಹೀಗೆ ಮಾಡುತ್ತಾಳೆ.

"ಕಾಳಮ್ಮ ಬಿದ್ದಂತ ನೊಣವನ್ನು ತಕ್ಕೊಂಡು
ಬಲಗೈಲಿ ಹಿಡಕೊಂಡ
ನೊಣಾನು ಸಬೋಯ್ತುವ್ವೆ
ಅಲುವೋ ನನ ಮಗನ ನೊಣವೆ
ರಾಗಿ ಒಡಪು ನಿನ್ ಮೈತುಂಬ ಹತ್ಕೆಂಡದಲ್ಲ
ನಿನ್ನೊಟ್ಟೆವೊಳೀಕೆ ಎಷ್ಟಂಬ್ಲಿ ಕುಡ್ಕೊಂಡಿದ್ದೀಯೆ
ನಿನ್ನೊಟ್ಟೆಒಳಗಿರೋ ಅಂಬ್ಲಿಯನಾಬುಡೋಳಲ್ಲ 'ಅಂತ್ಹೇಳಿ
ನೊಣತಕ್ಕೊಂಡು ಕೈಲಿಡ್ಕೊಂಡು
ನೊಣವ ಚೀಪಿ ಎಸೆದವಳೆ"[7]

ನೊಣ ಕೂಡ ಅಂಬಲಿಯನ್ನು ಕುಡಿಯುವಂತಿಲ್ಲ. ಹಕ್ಕಿ ನೀರು ಕುಡಿಯುವಂತಿಲ್ಲ. ಹೀಗೆ ಅತಿಚಿಕ್ಕ ನಷ್ಟದ ಪ್ರಮಾಣವನ್ನು ಕಾಳಮ್ಮ ಸಹಿಸಲಾರಳು ಭರಿಸಲಾರಳು. ನೊಣವು ಸಹಜವಾಗಿಯೋ ಆಕಸ್ಮಿಕವಾಗಿಯೋ ಬಿದ್ದಿದೆ. ಆದರೆ ಅದನ್ನು ಸಹ ಬಯ್ಯುತ್ತಾಳೆ. ಎಷ್ಟು ಕೀಳುಮಟ್ಟಕ್ಕೆ ಇಳಿಯುತ್ತಾಳೆಂದರೆ ಅದನ್ನು ಬಾಯಲ್ಲಿ ಚೀಪಿಕೊಂಡು ಎಸೆಯುತ್ತಾಳೆ. ಅದರಲ್ಲಿ ಮೆತ್ತಿದ್ದ ಅದು ತಿಂದಿದ್ದ ಅಂಬಲಿಯನ್ನು ಮತ್ತೆ ತಾನು ತಿನ್ನುತ್ತಾಳೆ. ಅಂಬಲಿಯನ್ನು ಕುಡಿದ ನಂತರ ಎಲೆ ಅಡಿಕೆಯನ್ನು ಹಾಕಿಕೊಂಡು ಸೊಸೆಯರನ್ನು ಕರೆದು 'ಕಾಲ್ಹೊತ್ತಮ್ಮಿ' ಎನ್ನುತ್ತಾಳೆ. ಸೊಸೆಯರು ಕಾಳಮ್ಮನಿಗೆ ಹೆದರಿ ಕಾಲೊತ್ತುತ್ತಾರೆ.

ಎಳ್ಳಿನ ರಾಶಿಯನ್ನು ಹಾಕಿ ಕಾವಲಿಟ್ಟಿರುವ ಜೀತದಾಳುಗಳಿಗೆ ಊಟವನ್ನು ತೆಗೆದುಕೊಂಡು ಕೋಣದ ಬಂಡಿಯಲ್ಲಿ ಹೋಗುತ್ತಾಳೆ. ಕಾಲಮ್ಮ ಕಣಕ್ಕೆ ಹೋಗುವ ಮೊದಲು ಸೊಸೆಯರಿಗೆ ಹೀಗೆ ಹೇಳುತ್ತಾಳೆ.

"ಏನ್ಲಾ ಸೊಸೇರೆ ನಾನು ಕಣುಕ್ಕೋಗ್ಬೇಕು
ಮುನ್ನೂರ್ ಮುವ್ವತ್ ಪಲ್ಲ ಎಳ್ ಒಕ್ಣೆಯಾಯ್ತದೆ
ಜೀತ್ಗಾರ್ರ ನಂಬಕೆ ಸಾಧ್ಯವಿಲ್ಲ ಆಳ್ಮಾಡಿದ್ದು ಹಾಳಾಯ್ತದೆ
ಯಾವನಾರ ದುಡುಗೆಟ್ ಮುಕ್ನರಾಸ್ಯಕೆ ಕೈಹಾಕಿ
ಎಳ್ಳುಕ್ಕಿ ಎಲ್ಲಿ ಎಂಜುಲ್ಮಾಡ್ಬುಟ್ಟೆನೊ ಕಾಣೆ
ನಮ್ಮನೆ ದೇವುರ್ ಕುಲುದೇವುರ್ ನೋಡುದ್ರೆ
ಬೆಳ್ತೋರುಸ್ತ್ರೆ ಹಸ್ತಾ ನುಂಗ್ತವೆ
ಇಂತೆ ಕುಲಗೆಟ್ ದೇವುರ್ಗಳು ನಮ್ಮವು
ನಾನು ಬ್ಯಾಗ್ನೆ ಕಣುಕೋಯ್ತಿನಿ"[8]

ಅಂದರೆ ಕಾಳಮ್ಮನಿಗೆ ಸಂಪತ್ತಿನ ಉಳಿಕೆ ಮತ್ತು ರಕ್ಷಣೆಯ ವಿಷಯದಲ್ಲಿ ಯಾರ ಮೇಲೂ ನಂಬಿಕೆ

ಇಲ್ಲ. ಇದಕ್ಕೆ ಸಂಬಂಧಿಸಿದಂತೆ ಅವಳು ಯಾರ ಜೊತೆ ಯಾವ ರಾಜಿಗೂ ಸಿದ್ಧಳಿಲ್ಲ. ಜೀತಗಾರರನ್ನು ನಂಬುವುದಕ್ಕೆ ಸಾಧ್ಯವಿಲ್ಲ ಆಳು ಮಾಡಿದ್ದು ಹಾಳಾಗುತ್ತದೆ ಎನ್ನುತ್ತಾಳೆ. ಸೊಸೆಯರನ್ನೇ ಆಗಲಿ ಜೀತಗಾರರನ್ನೇ ಆಗಲಿ ಅತಿಶಿಕ್ಷೆಯಿಂದ ಅವಳಿಗೆ ಹೆದರುವಂತೆ ಮಾಡಿದ್ದಾಳೆ. ಎಳ್ಳಿನ ವಿಷಯಕ್ಕೆ ಬಂದಾಗ ಎಳ್ಳು ಎಲ್ಲಿ ಎಂಜಲಾಗುವುದೋ ಎಂಬ ಆತಂಕವನ್ನೂ ಹೊಂದಿದ್ದಾಳೆ. ಆದರೆ ಅದು ತನ್ನ ಸಂಪತ್ತು ಎಲ್ಲಿ ಕಡಿಮೆಯಾಗುತ್ತದೋ ಎನ್ನುವ ಆತಂಕವೇ ಹೊರತು ದೇವರ ಬಗೆಗಿನ ದೇವರ ಪರಕೆಯ ಬಗೆಗಿನ ಆತಂಕ ಅಥವಾ ಭಯವಲ್ಲ. ಅವಳು ದೇವರನ್ನು ಬಯ್ಯುತ್ತಾಳೆ ಮತ್ತು ದೇವರ ಬಗ್ಗೆ ಯಾವ ಭಯವೂ ಇಲ್ಲ. 'ಬೆಳ್ ತೋರುಸ್ತ್ರೆ ಹಸ್ತಾ ನುಂಗ್ತವೆ ಇಂತೆ ಕುಲಗೆಟ್ ದೇವುರ್ಗಳು ನಮ್ಮವು' ಎನ್ನುವಲ್ಲಿಯ ಅಹಂಕಾರ, ಅಸಡ್ಡೆ ಸಂಪತ್ತಿನ ಮದ, ನಮಗೆ ಕಾಣುತ್ತದೆ ಅವಳು ಬೇಗನೆ ಕಣಕ್ಕೆ ಹೊರಡುವುದು ಜೀತದಾಳುಗಳು ಎಲ್ಲಿ ಎಳ್ಳನ್ನು ತಿಂದು ಸಂಪತ್ತು ಕಡಿಮೆಯಾಗುತ್ತದೋ ಎಂಬ ಆತಂಕದಿಂದ. ಮನೆಯನ್ನು ಒಂದು ಬಾರಿ ನೋಡಿ ಸೊಸೆಯರನ್ನು ಕರೆದು ಬಯ್ಯುತ್ತಾಳೆ. ರಾಗಿ ಬೀಸಿದವಳಾರು ಇರುವೆಗಳೆಲ್ಲ ರಾಗಿ ಕಚ್ಚಿಕೊಂಡು ಹೋಗುತ್ತಿದ್ದಾವೆ ನಮ್ಮ ಮನೆಯನ್ನು ಹಾಳು ಮಾಡಿದಿರಿ ನೀವು ಎನ್ನುತ್ತಾಳೆ. ರಾಗಿ ಕಲ್ಲಿನ ಸುತ್ತ ಕೆಂಡವನ್ನು ಸುರಿ ಇರುವೆಗಳು ಬರದಂತೆ ಎಂದು ಹೇಳಿ ಎಲ್ಲ ಸೊಸೆಯರಿಗೂ ಒಂದೊಂದು ಕೆಲಸವನ್ನು ಹೇಳುತ್ತಾಳೆ. ಹಿರಿಸೊಸೆ ದ್ಯಾವಜಮ್ಮನಿಗೆ ನಾನು ಎಳ್ಳಿನ ಕಣದಿಂದ ಬರುವ ತನಕ ಮನೆಯ ವ್ಯವಹಾರ ನಿನ್ನದು. ಎಲ್ಲರನ್ನೂ ಸಂಬಾಳಿಸಿಕೊಂಡು ಹೋಗು ಎನ್ನುತ್ತಾ ಮುಂದೆ ಹೀಗೆ ಹೇಳುತ್ತಾಳೆ.

"ಹಾಲ್ಕರ್ದು ಹೆಪ್ಪಾಕ ಕೆಲ್ಸ ನಿನ್ದು
ಹೆಪ್ಪಾಕಿ ಮೊಸ್ರುದಡುಮಿ ಬೆಣ್ಣೆ ತೆಗೆಯೋ ಕೆಲ್ಸ ನಿನ್ದು
ನಾನು ಕಣದಿಂದ ಬಂದೇಟ್ಗೆ
ಬೆಣ್ಣೆಯನ್ನು ತೂಗ್ತಿದ್ದಿನಿ
ನಿಮ್ಮಪ್ಪನ ದೆಸೆಯವ್ರೆ ಆಕಳ್ಳಿ ಅಪ್ಪನ ದೆಸೆಯವ್ರೆ ಆಕಳಿ
ಬಂದೋರ್ ಕೈಗೆ ನೀರ್‌ಕೊಡಬ್ಯಾಡ
ನೀರ್‌ಕೊಟ್ಟು ಉಣ್ಣಕಿಕ್ಕಬ್ಯಾಡ
ಬಿಸುಲ್ಲಲ್ಲೋಯ್ತಿದ್ರೆ ನೆಳ್ಳಿಗೆ ಕರೀಬ್ಯಾಡ
ಹಣ್ಣು ದಾವತ್ತಿ ಬಂದವುರ್ಗೆ
ಕುಡಿಯಾಕೆ ನಿರ್ಕುಡು ಬ್ಯಾಡ"[9]

ಅಂದರೆ ಅವಳಿಗೆ ಯಾರ ಮೇಲೂ ನಂಬಿಕೆ ಇಲ್ಲ. ಹಾಲನ್ನು ಅಳೆಯುತ್ತಾಳೆ. ಬೆಣ್ಣೆಯನ್ನು ತೂಗುತ್ತಾಳೆ. ಒಂದು ವೇಳೆ ಕಡಿಮೆ ಬಂದರೆ ಸೊಸೆಯರಿಗೆ ಕೊಡಬಾರದ ಕಷ್ಟವನ್ನು ಕೊಡುತ್ತಾಳೆ. ಸಂಪತ್ತಿನ ಒಂದು ರೂಪವಾದ ಹಾಲು ಮತ್ತು ಬೆಣ್ಣೆಯ ಬಗೆಗೆ ಅತ್ಯಂತ ಕಠಿಣ ಧೋರಣೆಯನ್ನು ಹೊಂದಿದ್ದಾಳೆ. ಸಂಬಂಧಿಕರಿಗೆ ಆಗಲಿ, ಮನೆಗೆ ಬಂದ ಅತಿಥಿಗಳಿಗೇ ಆಗಲಿ ಹಾಲನ್ನಾಗಲೀ, ಮೊಸರನ್ನಾಗಲೀ, ಬೆಣ್ಣೆಯನ್ನಾಗಲೀ ಕೊಡಬೇಡ ಹಸಿದು ಬಂದವರಿಗೆ ಅನ್ನವನ್ನಾಗಲೀ, ಬಾಯಾರಿಕೆಯಿಂದ ಬಳಲಿ ಬಂದವರಿಗೆ ನೀರನ್ನಾಗಲಿ ಕೊಡಬೇಡ ಎನ್ನುತ್ತಾಳೆ. ಬಿಸಿಲಿನಲ್ಲಿ ಹೋಗುವವರಿಗೆ ಕರೆದು ನೆರಳಿಗೆ ಕೂಡಿಸಬೇಡ ಎನ್ನುತ್ತಾಳೆ. ಈ ಸಂಕುಚಿತ

ಬಗೆಯ ಮನಸ್ಸು ತನ್ನ ಸಂಪತ್ತಿನ ಭದ್ರತೆಯ ಉಳಿತಾಯದ ಬಗೆಗೆ ಇದೆಯೇ ಹೊರತು, ಮತ್ತಾವುದೇ ದೃಷ್ಟಿಯಿಂದ ಅಲ್ಲ. ಪ್ರಾಯಶಃ ಮಾತೃ ಪ್ರಧಾನ ವ್ಯವಸ್ಥೆಯ ಅತ್ಯಂತ ಬಿಗಿ ವಾತಾವರಣಕ್ಕೆ ಮತ್ತು ಒಂದು ಕಾಲಕ್ಕೆ ಸಹಜವೇ ಆಗಿದ್ದ ಸಾಂಸ್ಕೃತಿಕ ವಿವರಗಳನ್ನು ಕಾವ್ಯ ನಮಗೆ ನೀಡುತ್ತದೆ.

ಕಾಳಮ್ಮ ಎಲ್ಲ ಸೊಸೆಯರಿಗೂ ಒಂದೊಂದು ಕೆಲಸವನ್ನು ನೇಮಿಸುತ್ತಾಳೆ. ಹೀಗೆ ಕೆಲಸವನ್ನು ವ್ಯವಸ್ಥಿತವಾಗಿ ಮಾಡುವುದರ ಮೂಲಕ ಮತ್ತು ಹಂಚುವುದರ ಮೂಲಕ ಕಡಿಮೆ ಅವಧಿಯಲ್ಲಿ ಹೆಚ್ಚು ಕೆಲಸವನ್ನು ಮಾಡಿ ಹೆಚ್ಚು ಸಂಪತ್ತು ಕ್ರೋಢೀಕರಿಸುವ ಇರಾದೆ ಕಾಳಮ್ಮನದು. ಕುಟುಂಬವನ್ನು ಒಟ್ಟಾಗಿರಿಸಿದಾಗ ಅದು ಸಂಪತ್ತನ್ನು ರಕ್ಷಿಸುತ್ತದೆ. ಇರುವ ಸಂಪತ್ತು ಬೆಳವಣಿಗೆಯಾಗುತ್ತದೆ. ಹಿರಿಸೊಸೆ ದ್ಯಾವಾಜಮ್ಮನನ್ನು ಕರೆದು ಜಂಗಮರು ಸನ್ಯಾಸಿಗಳು ಭಿಕ್ಷೆಗೆ ಬಂದರೆ ಏನು ಭಿಕ್ಷೆ ಕೊಡುತ್ತೀಯ ಎನ್ನುತ್ತಾಳೆ. ಆಗ ದ್ಯಾವಾಜಮ್ಮ ದೇವರು ಯಾವ ರೀತಿಯಲ್ಲಿ ಬರುತ್ತಾರೋ ಗೊತ್ತಾಗುವುದಿಲ್ಲ ಆದ್ದರಿಂದ ಬೆತ್ತದ ಮೊರದಲ್ಲಿ ಅಕ್ಕಿ ಬೇಳೆಯನ್ನು ತುಂಬಿಕೊಂಡು ಅವರಿಗೆ ಪೂಜೆಮಾಡಿಕೊಡುವುದಾಗಿ ಹೇಳುತ್ತಾಳೆ. ಆಗ ಅತ್ಯಂತಅಸಮಾಧಾನಗೊಂಡ ಕಾಳಮ್ಮ ಕೋಪದಿಂದ ದ್ಯಾವಾಜಮ್ಮನನ್ನು 'ದೇವರು ದಿಂಡರು ಎಂದು ಕಾಲ ಹಾಕೊ ಮಕ್ಕಳಿಗೆ ಕ್ವಾರಣ್ಯ ಕೊಟ್ಟು ನನ್ನ ಜೀವನವನ್ನು ಹಾಳು ಮಾಡುತ್ತೀಯ' ಎಂದು ರೇಗುತ್ತಾಳೆ.

"ನಾನ್ನೋಡುದ್ರೆ ಜೀನ್ತಾನದಲ್ಲಿ ಸಂಪಾದ್ನೆ ಮಾಡ್ತಿದ್ರೆ
ನೀನು ಬಂದೋರ್ಗೆ ಅಕ್ಕಿ ಬೇಳೆಯ 
ಮೊರುದ್ತುಂಬ ಕೊಟ್ಟೆಯ ನನ್ ಮಗುನ್ ಮಗ್ಳೆ
ಬಂದ್ಹೋಳ್ ರಾಗಿಯೋ ಬಂದ್ಹೋಳ್ ಹಸಿಟ್ಟೋ ಒಂದ್ಹೋಳ್ ಅಕ್ಕಿಯೋ
ನನ್ನಟ್ಟೆ ಬಾಗ್ಲಿಂದ ಈಚೆಗೆ ಬಂದಿದ್ದ ಆದ್ರೆ
ನಿನ್ನ ಗಾಚಾರ ಗಮ್ಕನ್ನಿ
ಮೈಮೇಲಿರೋ ಭೂತುಗಳ ಬುಡುಸ್ತಿನಿ"[10]

ಮಾದೇಶ್ವರನ ಭಕ್ತೆಯಾದ ಉದಾರ ಮನೋಭಾವವುಳ್ಳ ಹಿರಿಸೊಸೆ ದ್ಯಾವಾಜಮ್ಮ ಅವಳಿಗೆ ದೇವರು, ಜಂಗಮರು ಇವರ ಬಗ್ಗೆ ಭಕ್ತಿ ಗೌರವಗಳಿವೆ. ಇವರು ಬಂದಾಗ ಭಿಕ್ಷೆ ಕೊಡಬೇಕೆನ್ನುವ ಹಂಬಲವೂ ಇದೆ. ಹೀಗೆ ಭಿಕ್ಷೆ ನೀಡಿದಾಗಲೇ ನಮ್ಮ ಸಂಪತ್ತು, ಸುಖ, ನೆಮ್ಮದಿ ಕುಟುಂಬ ವೃದ್ಧಿಯಾಗುತ್ತದೆಂದು ತಿಳಿದಿದ್ದಾಳೆ. ಒಂದು ವೇಳೆ ಭಿಕ್ಷೆ ಕೊಡದಿದ್ದರೆ ಜಂಗಮರು, ಭಿಕ್ಷುಕರು, ಸನ್ಯಾಸಿಗಳು ಶಾಪಕೊಡುವರೆಂಬ ಭಯವೂ ಇದೆ. ಆದರೆ ಈ ಭಯವೇ ಪ್ರಧಾನವಾಗಿ ಅವಳ ಕೊಡುವ ಗುಣವನ್ನು ನಿರ್ಧರಿಸಿಲ್ಲ. ಬದಲಾಗಿ ಸ್ವಭಾವತಃ ಇರುವ ಕಲಿತಿರುವ ಸಾತ್ವಿಕ ಗುಣವೇ ಇದಕ್ಕೆ ಸಾಕ್ಷಿಯಾಗಿದೆ. ಆದರೆ ಇದಕ್ಕೆ ಸಂಪೂರ್ಣವಾಗಿ ವಿರುದ್ಧ ಸ್ವಭಾವ ತಾಮಸಿಕ ಗುಣ ಇದರ ಪ್ರತನಿಧಿಯೇನೋ ಎಂಬಂತೆ, ಈ ಗುಣವೇ ಮೈವೆತ್ತಂತೆ ಇರುವವಳು ಕಾಳಮ್ಮ. ತನ್ನ ಸಂಪತ್ತಿನ ಬಗ್ಗೆ ಅತೀವ ಅಭಿಮಾನವಿರುವ ಮತ್ತು ಆಸೆ ಇರುವ ಕಾಳಮ್ಮ ಈ ಸಂಪತ್ತನ್ನು ಅತ್ಯಂತ ಜೀನತನದಿಂದ ಸಂಪಾದಿಸಿದ್ದೇನೆ ಎಂದು ಹೆಚ್ಚಾಳತನದಿಂದಲೇ ಹೇಳಿಕೊಳ್ಳುತ್ತಾಳೆ. ಅಂದರೆ ಭಿಕ್ಷೆಯನ್ನು ಇದುವರೆಗೂ ನಾನು ಯಾರಿಗೂ ಕೊಟ್ಟಿಲ್ಲ ಮತ್ತು ನೀನೂ ಕೊಡಕೂಡದು ಎನ್ನುತ್ತಾಳೆ.

ದ್ಯಾವಾಜಿ ಮೊರದ ತುಂಬ ಭಿಕ್ಷೆ ನೀಡುತ್ತೇನೆ ಎಂದಾಗ. ಒಂದೋಳ್ ರಾಗಿ, ಒಂದ್ಯೋಳ್ ಹಸಿಟ್ಟು, ಅಕ್ಕಿಯೋ ಕಡಿಮೆ ಬಂದರೆ ಕೊಡುವ ಶಿಕ್ಷೆಯ ಬಗ್ಗೆ ಕಾಳಮ್ಮ ಹೇಳುತ್ತಾಳೆ. ಈ ಪ್ರಸಂಗದಲ್ಲಿ ಕಾಳಮ್ಮ ಅತಿಕ್ರೂರಿಯಾಗಿಯೇ ನಡೆದುಕೊಳ್ಳುತ್ತಾಳೆ. ಸೊಸೆಯರಿಗೆ ಹೀಗೆ ಹೇಳುತ್ತಾಳೆ : "ಕೆಟ್ಟರೆ ನಂಟರಿಲ್ಲ, ತಿರುದು ತಿನ್ನುವಾಗ ದೇವರಿಲ್ಲ, ಯಾರು ಅಯ್ಯಗಳು, ಜೋಗಿ ಜಂಗಮರು, ಬಂದ್ರೂ ಒಂದು ಹಿಡಿ ರಾಗಿ ಕೊಡಬೇಡ, ಸುಣ್ಣ ಕೊಡಬೇಡ, ನೀರು ಕೊಡಬೇಡ" ಎನ್ನುತ್ತಾಳೆ. ಒಂದು ಗಾಡಿಯ ಮೇಲೆ ಕುಳಿತು ಜೀತಗಾರರಿಗೆಲ್ಲ ಊಟವನ್ನು ಅಂದರೆ ಅಂಬಲಿಯನ್ನು ತೆಗೆದುಕೊಂಡು ಹೋಗುತ್ತಾಳೆ. ಎಳ್ಳಿನ ಕಣಕ್ಕೆ ಬಂದ ಕಾಳಮ್ಮನನ್ನು ಜೀತಗಾರರು ಅವಳನ್ನು ಗಾಡಿಯಿಂದ ಕೆಳಗಿಳಿಸಿ ಮುತ್ತಿನ ಗುಡಾರದ ಮುಕ್ಕಾಲು ಮಂಚದ ಮೇಲೆ ಕೂರಿಸುತ್ತಾರೆ. ಆಗ ಆಳುಗಳನ್ನು ಕರೆದು ಕಾಳಮ್ಮ ತಡವಾಗಿ ಊಟ ತಂದಿರುವೆನೆಂದು ಯಾರು ಯಾರು ಎಷ್ಟು ಎಳ್ ತಿಂದಿದ್ದೀರಿ ಎನ್ನುತ್ತಾಳೆ. ಆದರೆ ಯಾವ ಜೀತಗಾರನೂ ಮಾತನಾಡುವುದಿಲ್ಲ. ಅಂದರೆ ದುಡಿಯುವ ವರ್ಗ ಜನತೆ ಒಡೆಯನ ಮನೆಯ ಊಟವಲ್ಲದೆ ತಾವೇ ಬೆಳೆದ ತಿನಿಸನ್ನು ತಿನ್ನುವಂತಿಲ್ಲ. ಕೆಳವರ್ಗ ಅಂದರೆ ಬಡವರು ಶ್ರೀಮಂತ ಹೇಳಿದ ಹಾಗೆ ಕೇಳಬೇಕು ಇಲ್ಲವಾದರೆ ಶಿಕ್ಷೆ ಕಟ್ಟಿಟ್ಟ ಬುತ್ತಿ, ಇಲ್ಲಿಯೂ ಕಾಳಮ್ಮ ಆಳುಗಳಿಗೆ ಇದೇ ಪ್ರಶ್ನೆಯನ್ನೇ ಕೇಳುತ್ತಾಳೆ. ಅವಳ ಮಾತಿನಲ್ಲಿಯೇ ಅವಳ ದರ್ಪ ಗರ್ವ ತಿಳಿಯುತ್ತದೆ. ಸರಿಯಾದ ಸಮಯಕ್ಕೆ ಊಟ ಕೊಡದೆ ದುಡಿಸುವುದೇ ಮೊದಲ ಅಪರಾಧ ಆದರೆ ತಡವಾದರೂ ಸಹಿಸಿಕೊಳ್ಳಬೇಕು ಇಲ್ಲವಾದರೆ ಶಿಕ್ಷೆಯನ್ನು ಅನುಭವಿಸಬೇಕು. ಈ ಇಬ್ಬಗೆಯ ಧೋರಣೆ ಅಂದರೆ ಯಾವುದೇ ಕೆಲಸ ಮಾಡದೆ ಸಂಪತ್ತನ್ನು ಕ್ರೋಢೀಕರಿಸಿ ಸರಿಯಾದ ಸಮಯಕ್ಕೆ ತಿಂದು ಶರೀರ ಬೆಳೆಸಿರುವ ಕಾಳಮ್ಮ ಒಂದು ಕಡೆಯಾದರೆ ಮೈಮುರಿದು ದುಡಿದರೂ ತಡವಾಗಿ ಕಡಿಮೆ ಆಹಾರ ತಿನ್ನುವ ಜೀತಗಾರರು. ಇಲ್ಲಿಯೇ ನಮಗೆ ಆರ್ಥಿಕ ವಿಕೇಂದ್ರಿಕರಣದ ಪರಿಕಲ್ಪನೆ ಮೂಡುವುದು ಅದರ ಮಹತ್ವ ತಿಳಿಯುವುದು. ಈ ಬಡವ ಬಲ್ಲಿದ ಎಂಬ ವರ್ಗ ಶ್ರೇಣೀಕರಣ ನಮ್ಮ ಗಮನ ಸೆಳೆಯುತ್ತೆ. ಈ ಬಗ್ಗೆ ಹೆಚ್ಚು ವಿಶ್ಲೇಷಿಸುವಂತೆ ಆಲೋಚಿಸುವಂತೆ ಒತ್ತಾಯಿಸುತ್ತದೆ. ಇಲ್ಲಿ ಮನುಷ್ಯ ಸಮಾಜ ಸಂಪತ್ತನ್ನು ಹಂಚಿಕೊಳ್ಳದಿರುವುದನ್ನು ಸ್ಪಷ್ಟವಾಗಿ ಗುರ್ತಿಸಬಹುದು. ದುಡಿಯುವ ವರ್ಗದ ಅಸಮಾಧಾನ ಶ್ರೀಮಂತ ವರ್ಗದ ಕ್ರೌರ್ಯ ಇವೆರಡು ನಮಗೆ ತಿಳಿಯುತ್ತದೆ. ಉತ್ಪಾದನೆಯಲ್ಲಿ ಸಕ್ರಿಯವಾಗಿ ದುಡಿಯುವುದಷ್ಟೇ ಜೀತಗಾರರ ಕೆಲಸ. ಉತ್ಪಾದನೆಯಾದ ವಸ್ತುವನ್ನು ಅನುಭವಿಸುವ ಅಧಿಕಾರ ಅವರಿಗಿಲ್ಲ. ಇಲ್ಲಿ ಮನುಷ್ಯನನ್ನು ಕೂಡ ಪ್ರಾಣಿಗಳ ಮಟ್ಟಕ್ಕೆ ಇಳಿಸಿ ಅವರ ಮೇಲೆ ದೌರ್ಜನ್ಯ ನಡೆಸಲಾಗುತ್ತದೆ. ನ್ಯಾಯವಾಗಿ ಸಿಗಬೇಕಾದ ಉತ್ಪಾದನಾ ಪ್ರತಿಫಲದಿಂದ ವಂಚಿಸಲಾಗುತ್ತದೆ. ಇದು ಒಂದು ರೀತಿಯಲ್ಲಿ ವ್ಯವಸ್ಥಿತ ಶೋಷಣೆ ಎಂದು ಅರ್ಥೈಸುತ್ತೇನೆ. ಇಲ್ಲಿ ಕೂಡ ಮನುಷ್ಯನ ಶಕ್ತಿಯನ್ನು ನಿಗದಿತ ಸಮಯದವರೆಗೆ ಕೊಂಡುಕೊಳ್ಳಲಾಗುವುದು, ಏಕೆಂದರೆ ಬಡವರು ತಮ್ಮ ದೇಹ ಶಕ್ತಿಯನ್ನು ಮಾರಿ ಜೀವಿಸುತ್ತಾರೆ. ಮುಖ್ಯವಾಗಿ ಭೂ ಒಡೆತನವಾಗಲೀ ಬೇರೆ ಅನ್ಯಾಯದ ಸಂಪತ್ತಿನ ಮೂಲವಾಗಲೀ ಇಲ್ಲದವರಿಗೆ ಈ ಬಗೆಯ ಶೋಷಣಾ ಸಹಿತ ದುಡಿಮೆ ಅನಿವಾರ್ಯ ಎಂದು ಅವರೂ ಮಾನ್ಯ ಮಾಡಿರುತ್ತಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್ವರ್ಗದ ಮತ್ತು ಆರ್ಥಿಕವಾಗಿ ಬಲಿಷ್ಠರಾಗಿರುವವರು ಯಾವ ನಿಯಮಗಳನ್ನು ರೂಪಿಸಿಲಾಗುತ್ತದೋ ಅದೇ ರೀತಿ ಸಮಾಜ ಇರುತ್ತದೆ. ಈ ಬಗೆಯ ಸಮಾನತೆಯನ್ನು ನಿವಾರಿಸಿ ಸಂಪತ್ತಿನ ಹಂಚಿಕೆಯ ಆರ್ಥಿಕ ಸಮಾನತೆಯ ಸಮಾಜವನ್ನು ರೂಪಿಸುವುದು ಮಾದೇಶ್ವರನ

ಗುರಿ. ಕಾಳಮ್ಮನಿಗೆ ಕಣದಲ್ಲಿರುವ ಎಳ್ಳನ್ನು ಜೀತಗಾರರು ತಿಂದಿರಬಹುದು ಎಂದು ಅನುಮಾನ. ಅದಕ್ಕಾಗಿ ಅವಳು ಒಬ್ಬೊಬ್ಬರನ್ನು ಕೇಳುತ್ತಾಳೆ. ಇವಳ ಗುಣ ಮೊದಲೇ ತಿಳಿದಿದ್ದರಿಂದ ಯಾವ ಜೀತಗಾರರು ಮಾತನಾಡುವುದಿಲ್ಲ. ಆಗ ಮತ್ತೆ ಅವಳು ಮಾತನಾಡದಿದ್ದರೆ ಶಿಕ್ಷೆ ಮಾಡುವುದಾಗಿ ತಿಳಿಸುತ್ತಾಳೆ. ಪ್ರತಿಯೊಬ್ಬರೂ ನಡುಗುತ್ತಾ ನಿಂತಿರುತ್ತಾರೆ. ಅದನ್ನು ಜೀತಗಾರರು ತಾವು ಕಾಳಮ್ಮನಿಗೆ ಕೊಡುವ ಗೌರವ ಎಂದು ತಿಳಿದಿದ್ದಾರೆ ಆದರೆ ಕಾಳಮ್ಮನಿಗೆ ಅದು ಪ್ರತಿಷ್ಠೆಯ ಮತ್ತು ಅಧಿಕಾರದ ಗತ್ತು.

"ಅವ್ವಾ ನಾನು ತಿಂದಿಲ್ಲ ಕನವ್ವ
ಅವ್ವಾ ನಾನು ತಿಂದಿಲ್ಲ ಕನವ್ವ ಅಂದ್ರಂತೆ ಎಲ್ಲಾ ಜೀತ್ಗಾರ್‍ರು
ಒಬ್ರೂ ತಿಂದಿಲ್ಲ ಅಂತಿದ್ದೀರಲ್ಲ ಮತ್ತಿನ್ಯಾರು ತಿಂದಿದ್ದೀರಿ
ತಿಂದಿರೋದ ತಿನ್ನದೇ ಹೋದರು ನಾನ ಗೊತ್ಮಾಡ್ತೀನಿ
ಎಲಾ ನನ್ಮಗುನ್ ಮಕ್ಕೆ
ಎಲ್ಲರೂ ಬಾಯ್ತುಂಬ ನೀರ್ತುಂಬ್ಕೊಂಡು
ನೀರ್ ಮುಕ್ಕಳ್ಸಿ ಮಕ್ಕುಳ್ಸಿ
ಕಳೀಕುಗೀರಿ"[11]

ಅಂದರೆ ಪ್ರತಿಯೊಬ್ಬರ ಮೇಲೂ ಅನುಮಾನ. ಜೀತಗಾರರನ್ನೆಲ್ಲ ಒತ್ತಾಯಿಸಿ ಕೇಳುತ್ತಿದ್ದಾಳೆ. ಯಾರೂ ಇಲ್ಲ ಎಂದರೂ ಅವಳ ಅನುಮಾನ ಮುಗಿದಿಲ್ಲ. ಅವಳ ಅನುಮಾನ ಎಷ್ಟು ಬಲವಾದುದೆಂದರೆ ಪ್ರತಿಯೊಬ್ಬರನ್ನೂ ಬಾಯಲ್ಲಿ ನೀರು ಹಾಕಿ ಮುಕ್ಕಳಿಸಿ ಕೆಳಗೆ ಉಗಿಯಿರಿ ಎನ್ನುವ ಹಂತಕ್ಕೂ ಹೋಗುತ್ತಾಳೆ. ಪ್ರತಿಯೊಬ್ಬರೂ ಹಾಗೆಯೇ ಮಾಡುತ್ತಾರೆ. ಹಾಗೆ ಮಾಡದೆ ಬೇರೆ ಮಾರ್ಗವೇ ಇರುವುದಿಲ್ಲ. ಯಾರ ಬಾಯಿಂದಲೂ ಎಳ್ಳಿನ ಸಿಪ್ಪೆ ಬರುವುದಿಲ್ಲ ಆದರೆ ಯಾವನೋ ಒಬ್ಬ ತಡೆಯಲಾರದೆ ಒಂದು ಎಳ್ಳನ್ನು ಕುರುಕಿದ್ದ ಅವನು ನೀರು ಮುಕ್ಕಳಿಸಿ ಕೆಳಗೆ ಉಗಿಯುತ್ತಿದ್ದಂತೆ ಪಚ್ಚೆಕಲ್ಲಿನ ಮೇಲೆ ಒಂದು ಎಳ್ಳಿನ ಸಿಪ್ಪೆ ಸಿಗುತ್ತದೆ. ಆಗ ಕಾಳಮ್ಮ ಕೋಪದಿಂದ ಅವನನ್ನು ಶಿಕ್ಷೆಗೆ ಒಳಪಡಿಸುತ್ತಾಳೆ. ತಾನು ಕಂಡಂತೆ ಇಷ್ಟು ಎಳ್ಳು ತಿಂದಿರುವೆ ಕಾಣದಿದ್ದಾಗ ಇನ್ನೆಷ್ಟು ತಿಂದಿದ್ದೀಯ ಎಂದು ಅವನಿಗೆ ಕೊಡಬಾರದ ಕೊಲೆ ಕಷ್ಟವನ್ನೂ ಕೊಡುತ್ತಾಳೆ. ಹುಣಸೆ ಸೆಬ್ಬೆಯಿಂದ ಅವನಿಗೆ ಹೊಡೆಸುತ್ತಾಳೆ. ಎಳ್ಳು ಎಲ್ಲರೂ ತಿನ್ನ ಬಯಸುವ ಪದಾರ್ಥ ಆದರೆ ಅದನ್ನು ಕೈಯ್ಯಲ್ಲಿಟ್ಟುಕೊಂಡು ತಿನ್ನಲಾರದೆ ಉಳಿಯುವ ಪ್ರಾಣಿ ಮನುಷ್ಯನಲ್ಲ. ಆದರೆ ಹೆಚ್ಚು ತಿನ್ನಬಾರದೆಂದುಕೊಂಡರೂ ಸ್ವಲ್ಪವಾದರೂ ತಿನ್ನಲೇಬೇಕಾದ ಅತಿಯಾಸೆಗೆ ಮಾನವನನ್ನು ಆಕರ್ಷಿಸುತ್ತದೆ. ಹಾಗೆ ಮಾಡಿದ್ದರಿಂದಲೇ ಅದನ್ನು ತಿಳಿಯದೆ ತನ್ನ ರಾಶಿಯಲ್ಲಿ ಅಷ್ಟು - ಎಳ್ಳು ಕಡಿಮೆಯಾದವು ಎಂದು ಕಾಳಮ್ಮನ ಸಿಟ್ಟು ಅತಿಯಾದ ಶಿಕ್ಷೆಯನ್ನು ಅನುಭವಿಸಲಾರದೆ ಅವನು ಕಾಳಮ್ಮನ ಕಾಲಿಗೆ ಬಿದ್ದು ಬೇಡುತ್ತಾನೆ. ಆದರೆ ಅವಳಿಗೆ ಕರುಣೆ ಎಂಬುದಿಲ್ಲ. ಅವನನ್ನು ಜೀವಸಹಿತ ಉಳಿಸುವುದಿಲ್ಲ ಎಂದು ಕಾಳಮ್ಮ ಗುಡುಗುತ್ತಾಳೆ. ಆಗ ಜೀತದಾಳು 'ತಾಯಿ ನಾನು ಸತ್ಯವಾಗಲು ತಿನ್ನಲಿಲ್ಲ ಗಾಳಿಗೆ ಒಂದು ಕಾಳು ತೂರಿಕೊಂಡು ಬಂದು ನನ್ನ ಹಲ್ಲಿಗೆ ಸಿಕ್ಕಿಬಿಡ್ತು ಹಾಗಾಗಿ ಕುರುಕಿದೆ' ಎನ್ನುತ್ತಾನೆ.

"ನಿಮ್ಮೆಳ್ಳ ತಿಂದುದ್ಕೆ ನಾನು ಸಾಯೋಗಂಟ ನಿಮ್ಹಟ್ಟಿ
ಜೀತ್ಗಾರ್ನಾಗಿ ಗೇಯ್ತೀನಿ
ಹತ್ ಮುಂಡೇ ಮಗನೆ ಜೀತಗೇಯ್ತೀಯ?
ಗೇಯ್ತೀನಿ ನನತಾಯಿ
ಹಂಗಾರೆ ಬರಿ ಅಗ್ಗರುಮೆಂಟ ಅಂದ
ಅಗ್ಗರಮೆಂಟು ಬರಸ್ಕೊಂಡು"[12]

ಅತೀ ಕ್ರೌರ್ಯಕ್ಕೆ ಉದಾಹರಣೆಯಾಗಿದೆ ಈ ಸಂಗತಿ. ಜೀತಗಾರನನ್ನು ಭೂಮಾಲೀಕ ಶೋಷಿಸುವ ಪರಿಯ ಒಂದು ಮುಖ. ಮೊದಲೇ ಬಡವನಾಗಿರುವ ಜೀತಗಾರ ಶ್ರೀಮಂತರ ಮುಂದೆ ಮಾತನಾಡುವುದಿಲ್ಲ. ಕಾರಣ ಅವನಿಗೆ ಬೇರೆಯೆಲ್ಲೂ ಕೆಲಸ ಸಿಕ್ಕುವುದಿಲ್ಲ. ಹಾಗಾಗಿ ಅವನ ಬದುಕು ನಡೆಯುವುದಿಲ್ಲ. ಇದು ಒಂದು ಸರಪಳಿಯಂತೆ ಅವನನ್ನು ಮತ್ತಷ್ಟು ಬಡತನಕ್ಕೆ ನೂಕುತ್ತದೆ. ಹೀಗಾಗಿ ಅವನು ಶ್ರೀಮಂತರ ವಿರುದ್ಧ ಮಾತನಾಡುವುದಿಲ್ಲ. ಕಾಳಮ್ಮನ ಶಿಕ್ಷೆ ಅತಿಯಾದಾಗ ಅವಳ ಕಾಲಿಗೇ ಬಿದ್ದು ತಾನು ಜೀವಂತವಿರುವವರೆಗೂ ಜೀತ ಮಾಡುವುದಾಗಿ ಹೇಳುತ್ತಾನೆ. ಪ್ರಾಯಶಃ ಈ ವೈರುಧ್ಯ ಯಾವ ಕೃತಿಯಲ್ಲೂ ಬರುವುದಿಲ್ಲ. ತಿಂದಿರುವುದು ಒಂದು ಎಳ್ಳು ಆದರೆ ಅದಕ್ಕೆ ಪ್ರತಿಫಲವಾಗಿ ಅವನ ಜೀವನ ಪೂರ್ತಿ ಜೀತ ಮಾಡಿ ಅದರ ಬೆಲೆ ತೀರಿಸಬೇಕು. ಇಡೀ ಪರಿಸ್ಥಿತಿಯ ವ್ಯಂಗ್ಯ ಬಡವರ ಜೀವನ ಆರ್ಥಿಕ ಕೇಂದ್ರೀಕರಣದ ಫಲ. ಹಾಗೆ ಹೇಳಿರುವ ಹೇಳಿಕೆಯನ್ನು ಕಾಳಮ್ಮ ನಂಬಲಾರಳು. ಆದ್ದರಿಂದ ತನ್ನ ಹೇಳಿಕೆಯನ್ನು 'ಅಗ್ಗರುಮೆಂಟು' ಮಾಡು ಎನ್ನುತ್ತಾಳೆ. ಬಡವನಾದ ಜೀತಗಾರ ಬಾಯಿ ಮಾತಿನಲ್ಲಿ ಹೇಳಿದ್ದನ್ನು ಅವನು ಮಾಡುತ್ತಿದ್ದ ಆದರೆ ಕಾಳಮ್ಮನಿಗೆ ಕಾನೂನಿನ ಮೂಲಕವೂ ಅದು ಮಾನ್ಯವಾಗಬೇಕು ಎನ್ನುತ್ತಾಳೆ. ಜೊತೆಗೆ ದೇಶದ ಕಾನೂನು ಕೂಡ ಉಳ್ಳವರ ಶ್ರೀಮಂತರ ಸ್ವತ್ತಾಗಿರುವುದರಿಂದ ಅದನ್ನು ಅವರೇ ರೂಪಿಸಿರುವುದರಿಂದ ಎಲ್ಲ ರೀತಿಯಿಂದಲೂ ಕಾಳಮ್ಮನಿಗೆ ರಕ್ಷಣೆ ಸಿಗುತ್ತದೆ. ಅಂದರೆ ಜೀತಗಾರ ಜೀವನ ಪರ್ಯಂತ ಜೀತನಾಗಿಯೇ ಉಳಿಯುತ್ತಾನೆ.

ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕಾವ್ಯದಲ್ಲಿ ಬಂದಿರುವ Agreement ಎನ್ನುವ ಪದ ಇದು ಕಾಲಾಂತರದಲ್ಲಿ ಬಂದು ಸೇರಿಕೊಂಡು ಪದವಾಗಿದೆ. ಮಹಾಕಾವ್ಯಗಳ ಬೆಳವಣಿಗೆಯನ್ನು ಕುರಿತು ಇಲ್ಲಿ ಗಮನಿಸಬಹುದು. ಪ್ರಾಯಶಃ ಮಾದೇಶ್ವರ ಜೀವಿಸಿರಬಹುದಾದ ಕಾಲದಲ್ಲಿ ಈ ರೀತಿಯ 'ನೊಂದಣಿ' ವ್ಯವಸ್ಥೆಯೇ ಇರಲಿಲ್ಲ ಎನಿಸುತ್ತದೆ. ಆದ್ದರಿಂದ ಇದು ಅಂದರೆ ನೊಂದಣಿ ಕುರಿತ ಮಾತು 20ನೇ ಶತಮಾನದ ಸೇರ್ಪಡೆಯಾಗಿದೆ. ಮೂಲದಲ್ಲಿ ಅವನು ಹಾಗೆ ಹೇಳುವುದನ್ನು ಕಾಳಮ್ಮ ಒಪ್ಪಿಯೂ ಬೇರೆ ರೀತಿಯಾದ ಭಾಷೆ, ಪ್ರಮಾಣ, ಇತ್ಯಾದಿಗಳನ್ನು ಮಾಡಿಸಿರಬಹುದು. ಆದರೆ ನೊಂದಣಿ ವ್ಯವಸ್ಥೆ ಆನಂತರ ಜನತೆ ಸೇರಿಸಿದ ವಿಷಯವಾಗಿದೆ.

ಕಣಕ್ಕೆ ತಂದ ಊಟವನ್ನು ಜೀತದಾಳುಗಳಿಗೆಲ್ಲ ಇಡುತ್ತಾಳೆ ಕಾಳಮ್ಮ. ಎಲ್ಲ ನಲವತ್ತೈದು ಜೀತಗಾರರಿಗೂ ಅವರವುರ ಎಲೆಗೆ ಅರ್ಧ ಅರ್ಧ ಮುದ್ದೆ ಇಡುತ್ತಾಳೆ. ಅವುರ ಅಷ್ಟನ್ನು ತಿಂದು ತೃಪ್ತಿಯಾಗದೆ.

"ಮ್ಯಾಕು ನೋಡ್ತರೆ ಕಳೀಕೂ ನೋಡ್ತರೆ
ಏನ್ರುಲಾ ನನ್ ಮಗುನ್ ಮಕ್ಳೆ
ಮ್ಯಾಕೊ ಕೆಳೀಕೊ ನೋಡ್ತಾ ಕುಂತಿದ್ದೀರಿ
ಇನ್ನು ಇಕ್‌ತಳೆ ಅಂತ ಎಲೆ ಮಡೀಕೊಂಡು ಕುಂತಿದ್ದೀರ್ಯಾ
ಹಿಂಗಾರೆ ನನ್ಮನೆ ಎಕ್ಕುಟ್ಟುಸ್ಬುಡ್ತೀರಿ
ಮ್ಯಾಕೇಳಿ"[13]

ಈ ಸನ್ನಿವೇಶವೇ ಮನಸ್ಸಿಗೆ ಕರುಣೆ ಹುಟ್ಟಿಸುವಂತಹದ್ದು ದುಡಿಯುವವರಿಗೆ ಊಟವೇ ಪ್ರಧಾನ. ಮೈ ಮುರಿದು ದುಡಿದ ಜೀತಗಾರರಿಗೆ ಅಲ್ಪ ಆಹಾರ ಯಾವುದಕ್ಕೂ ಬರುವುದಿಲ್ಲ. ಆದರೆ ಅತ್ಯಂತ ಜೀನಳಾದ ಕಾಲಮ್ಮ ಅರ್ಧಮುದ್ದೆ ಇಡುತ್ತಾಳೆ. ಆದರೆ ಹಸಿದ ಆಳುಗಳಿಗೆ ತೃಪ್ತಿಯಾಗಲಿಲ್ಲ. ಇನ್ನು ಊಟ ಸಿಗಬಹುದು ಎಂದು ಕುಳಿತಿರುವಾಗ ಅವರನ್ನು ಬಯ್ಯುತ್ತಾಳೆ. ಊಟದಲ್ಲಿ ಮಿತಿ ಇರಬೇಕು ಎಂದು, ಹೀಗೆ ಹೆಚ್ಚು ಹೆಚ್ಚು ನಿಮಗೆ ಊಟಕೊಟ್ಟರೆ ನಮ್ಮ ಮನೆ ನಾಶವಾಗುತ್ತದೆ. ಆಗಾಗಿ ನಿಮಗೆ ಸಿಕ್ಕಿರುವ ಅಷ್ಟೆ ಇನ್ನು ಮುಂದೆ ನೀಡುವುದಿಲ್ಲ ಎನ್ನುತ್ತಾಳೆ. ಕಾಳಮ್ಮನ ಜೀನತನ ಮತ್ತೆ ಇಲ್ಲಿ ತಿಳಿಯುತ್ತದೆ. ಇವಳ ಸಂಪತ್ತಿಗೆ ಕಾರಣವಾದ ಆಳುಗಳಿಗೆ ಸರಿಯಾದ ಹಾರೈಕೆ ಇರಲಿ ಊಟವನ್ನೆ ನೀಡುವುದಿಲ್ಲ. ಇದೇ ಪರಿಸ್ಥಿತಿಯ ವ್ಯಂಗ್ಯ ಅವರು ಆಹಾರವನ್ನು ಉತ್ಪಾದಿಸುತ್ತಾರೆ. ಆದರೆ ಅವರೇ ಹಸಿದಿರುತ್ತಾರೆ. ಒಂದುವೇಳೆ ಯಾವೊಬ್ಬನಾದರೂ ಮುಂದುವರೆದು ಇರುವುದನ್ನು ತಿಂದರೆ ತನ್ನ ಪ್ರಾಣವನ್ನು ಕಳೆದುಕೊಳ್ಳಬೇಕಾಗುತ್ತದೆ. ಅವಳು ಸಂಪತ್ತಿನ ಕ್ರೋಢೀಕರಣಕ್ಕೆ ಪ್ರಾಮುಖ್ಯ ನೀಡುತ್ತಾಳೆಯೇ ಹೊರತು ದುಡಿಯುವ ತನ್ನ ಸಂಪತ್ತಿನ ಹೆಚ್ಚಳದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಆಳುಗಳಿಗಲ್ಲ. ಮಾದೇಶ್ವರ ಈ ಬಗೆಯ ಮಾನಸಿಕವಾಗಿ ಕ್ರೂರವಾದ ವ್ಯಕ್ತಿಗಳಿಗೆ ಮುಂದೆ ಕಠಿಣವಾಗಿಯೇ ಪಾಠ ಕಲಿಸುತ್ತಾನೆ. ಇರುವೆಗಳು ಎಳ್ಳನ್ನು ಕಣದಿಂದ ತೆಗೆದುಕೊಂಡು ಹೋಗುತ್ತಿರುತ್ತವೆ. ಆದರೆ ಅದನ್ನು ಸಹಿಸಲು, ಅಷ್ಟು ನಷ್ಟ ಅನುಭವಿಸಲು ಕಾಳಮ್ಮ ಸಿದ್ಧಳಿಲ್ಲ. ಹಾಗಾಗಿ ಅವುಗಳನ್ನು ಓಡಿಸಿ ಎಳ್ಳಿನ ರಾಶಿಯ ಸುತ್ತಕೆಂಡವನ್ನು ಸುರಿಸುತ್ತಾಳೆ. ಇರುವೆಗಳು ಬರಲಾಗದಂತೆ ಎಳ್ಳನ್ನು ಕಾಯಲು ಕುಳಿತುಕೊಳ್ಳುತ್ತಾಳೆ ಕಾಳಮ್ಮ. ಒಂದು ವೇಳೆ ನಿದ್ದೆ ಬಂದರೆ ಇರುವೆಗಳಾಗಲೀ ಕಳ್ಳರಾಗಲೀ ಎಳ್ಳನ್ನು ಕದಿಯುತ್ತಾರೆ ಎಂದು ಒಂದು ದೊಡ್ಡ ಕಡಾಯಿಯಲ್ಲಿನ ನೀರನ್ನು ತರಿಸಿಕೊಂಡು ಅದರ ಹತ್ತಿರ ಕುಳಿತುಕೊಳ್ಳುತ್ತಾಳೆ. ನಿದ್ರೆ ಬಂದರೆ ಎಳ್ಳನ್ನು ಯಾರಾದರೂ ತೆಗೆದುಕೊಂಡು ಹೋಗತ್ತಾರೆ ಎಂಬುದು ಅವಳ ಆತಂಕ. ಇದರ ಜೊತೆಗೆ ನಾಯಿಗಳನ್ನು ಕೂಡ ಕಟ್ಟಿಕೊಂಡಿದ್ದಾಳೆ. ಅಂದರೆ ಸಂಪತ್ತಿನ ಬಗೆಗಿನ ಮೋಹ ಅವಳಿಗೆ ಎಷ್ಟಿದೆ ಎಂದು ತಿಳಿಯುತ್ತದೆ. ಜೀವನ ಪೂರ್ತಿ ಅವಳು ಸಂಪತ್ತಿನ ಸಂಗ್ರಹದಲ್ಲೇ ಕಳೆಯುತ್ತಾಳೆ.

ಬೇವಿನ ಕಾಳಮ್ಮನ ವ್ಯಕ್ತಿತ್ವ ಈ ರೀತಿಯದಾದರೆ ಅದಕ್ಕೆ ಸಂಪೂರ್ಣ ವಿರುದ್ಧವಾದ ವ್ಯಕ್ತಿತ್ವ ಕಾಳಮ್ಮನ ಹಿರಿಸೊಸೆ ದ್ಯಾವಮ್ಮನದು. ಮಾದೇಶ್ವರ ದ್ಯಾಮಾಜಮ್ಮನ ಭಕ್ತಿಯನ್ನು ತಿಳಿಯಬೇಕು ಎಂದು ಅವಳ ಮನೆಗೆ ಬರುತ್ತಾನೆ. ಮಾದೇಶ್ವರ ಮನೆಯ ಬಾಗಿಲಲ್ಲಿದ್ದ ಸರ್ಪ, ನಾಯಿಗಳು, ಕಾವಲುಗಾರರು ಮತ್ತು ಬೀಜದ್ಹೋರಿ ಇವುಗಳನ್ನು ನಿಷ್ಕ್ರಿಯಗೊಳಿಸುತ್ತಾನೆ. ಮನೆಯ ಮುಂದೆ ನಿಂತು ಭಿಕ್ಷೆಯನ್ನು ಸಾರುತ್ತಾನೆ. ಆದರೆ ಕಾಳಮ್ಮನ

ಸೊಸೆಯರು ಅತ್ತೆಯ ಭಯದಿಂದ ಯಾರೂ ಭಿಕ್ಷೆ ನೀಡುವುದಿಲ್ಲ. ಜೊತೆಗೆ ತಿಳಿದರೂ ತಿಳಿಯದಂತೆ ನೋಡಿದರೂ ನೋಡದಂತೆ ಇರುತ್ತಾರೆ. ನಂತರ ಹಿರಿಸೊಸೆ ದ್ಯಾವಾಜಮ್ಮ ಮಾದೇಶ್ವರನನ್ನು ಗುರ್ತಿಸುತ್ತಾಳೆ. ಆದರೆ ಭಿಕ್ಷೆ ನೀಡಲು ಕಾಳಮ್ಮ ವಿಧಿಸಿರುವ ನಿರ್ಬಂಧವನ್ನು ಹೇಳುತ್ತಾಳೆ. ತಂದೆಯ ಮನೆಗೆ ಹೋದರೆ ನಿಮಗೆ ಭಿಕ್ಷೆ ನೀಡುವುದಾಗಿ ದ್ಯಾವಾಜಮ್ಮ ಹೇಳುತ್ತಾಳೆ. ಕಾಳಮ್ಮನ ಜೀನತನವನ್ನೂ ಅವಳು ಇರುವೆಗಳನ್ನು ಹಕ್ಕಿಗಳನ್ನು ಕಂಡ ರೀತಿಯನ್ನು ಮಾದೇಶ್ವರನಿಗೆ ಹೇಳುತ್ತಾಳೆ. ಒಂದು ರಾಗಿ, ಅಕ್ಕಿ, ಮೊದಲಾದ ಧಾನ್ಯಗಳೂ, ಹಾಲು ಬೆಣ್ಣೆ ಇವುಗಳು ಕಡಿಮೆಯಾದರೆ ನನಗೆ ಕೊಡಬಾರದ ಕಷ್ಟವನ್ನು ಕೊಡುತ್ತಾಳೆ. ಜಂಗಮರು ಭಿಕ್ಷುಕರು ಬಂದರೆ ಭಿಕ್ಷೆಯನ್ನು ನೀಡಬೇಡ ಎಂದಿದ್ದಾಳೆ. ಒಂದು ವೇಳೆ ಕೊಟ್ಟರೆ ಅತ್ಯಂತ ಅಸಹ್ಯವಾಗಿ ಅವಮಾನಗೊಳಿಸಿ ಶಿಕ್ಷಿಸುತ್ತಾಳೆ. ಒಂದು ವೇಳೆ ಅವಳು ಹೇಳಿದಂತೆ ಕೇಳಿದರೆ ಹಾಲು, ಬೆಣ್ಣೆ ಎಲ್ಲಿ ಅಳತೆಗೆ ತಕ್ಕಷ್ಟು ಇದ್ದರೆ ಮುದ್ದಾಡುತ್ತಾಳೆ ಎನ್ನುತ್ತಾಳೆ. ಮಹಾಕಾವ್ಯವೇ ಈ ಸ್ಥಿತಿಯನ್ನು ಹೀಗೆ ವಿವರಿಸುತ್ತದೆ.

"ಅಯ್ಯಾ ಗುರುವೆ
ನಮ್ಮತ್ತೆಯಾದ ಕಾಳಮ್ಮ
ರಾಗಿ ಒಡಪನ್ನ ಎರಾ ಎತ್ಕೊಂಡೋಯ್ತವೆ ಅಂತ್ಹೇಳಿ
ಜೀತಾಗ್ರುಗೆ ಒಂದ್ಗುಳುಕು ಕಮ್ಮಿಯಾಯ್ತದೆ ಅಂತ
ರಾಗಿಕಲ್ಲಿನ ಸುತ್ತ ತರಿಗೆಂಡ ಬುಡ್ಸವುಳೆ
ಒಂಬತ್ಬಳ್ಳ ರಾಗಿ ಅಳ್ತೆ ಮಾಡಿ ಕೊಡ್ತಳೆ
ಹಿಂದುಲ ಕಲ್ ತಗಿಯಕಿಲ್ಲ
ಮುಂದುಲ ಜೊಳ್ ತಗಿಯಕಿಲ್ಲ
ಬೀಸ್ತಂತ ಹಸೀಟ್ನ ಕೂಡ ಅಳ್ತೆ ಮಾಡ್ತಳೆ"[14]

ಹೀಗೆ ಒಂದು ಕುಟುಂಬದ ಅತಿಚಿಕ್ಕ ವಿವರಗಳನ್ನು ಕಾವ್ಯ ವಿವರಿಸುತ್ತದೆ. ಮನುಷ್ಯರ ಸ್ವಭಾವಗಳನ್ನು ಕೂಡ ವಿವರಿಸುತ್ತದೆ. ಅತ್ತೆ ಕಾಳಮ್ಮನ ಬುದ್ಧಿಯನ್ನು ಜೀನತನವನ್ನು ಮಾದೇಶ್ವರನಿಗೆ ವಿವರಿಸುತ್ತಾಳೆ. ಆದರೆ ಮಾದೇಶ್ವರ ಅವಳಿರುವ ಕಣಕ್ಕೆ ದಾರಿತೋರಿಸಿದರೆ ಹೋಗುತ್ತೇನೆ ಎನ್ನುತ್ತಾನೆ. ಆದರೆ ದ್ಯಾವಾಜಮ್ಮ ಮಾದೇಶ್ವರನಿಗೆ ಭಕ್ತಿಯಿಂದ ದಯವಿಟ್ಟು ನೀವು ಹೋಗಬೇಡಿ ಏನಾದರು ಬಯ್ಯುತ್ತಾಳೆ ಎನ್ನುತ್ತಾಳೆ. ಕಣದ ರಕ್ಷಣೆಗೆ ನಾಯಿಗಳನ್ನು ಸಾಕಿರುವುದಾಗಿಯೂ ಹೇಳುತ್ತಾಳೆ. ಆದರೆ ಮಾದೇಶ್ವರ ತಾನು ನಿನ್ನ ಮನೆಯ ಉದ್ಧಾರಕ್ಕೆ ಬಂದಿರುವುದಾಗಿಯೂ ಅವಳಿಗೆ ಒಳ್ಳೆಯ ಬುದ್ಧಿ ಕೊಡುವುದಾಗಿಯೂ ಹೇಳುತ್ತಾನೆ. ನಂತರ ದ್ಯಾವಾಜಮ್ಮ ತನ್ನ ತಂಗಿಯರನ್ನೆಲ್ಲಾ ಕರೆದು ಜಂಗಮರಿಗೆ ಭಿಕ್ಷೆ ನೀಡಬೇಕು ಎನ್ನುತ್ತಾಳೆ. ಆಗ ಅವಳ ತಂಗಿಯರೆಲ್ಲರೂ ಒಪ್ಪಿ ಮೂಗುತಿಯನ್ನೂ ದಾನವಾಗಿ ನೀಡುತ್ತಾರೆ. ಇವರ ಭಕ್ತಿಯನ್ನು ಮೆಚ್ಚಿದ ಮಾದೇಶ್ವರ ಅವರ ಮೂಗುತಿಗಳನ್ನು ಹಿಂದಿರುಗಿಸುತ್ತಾನೆ. ಅವಳಿಗೆ ಕಾಳಮ್ಮನಿರುವ ಕಣಕ್ಕೆ ದಾರಿ ತೋರಿಸಿ ಎಂದು ಕೇಳುತ್ತಾನೆ. ಸೊಸೆಯರೆಲ್ಲ ಮಾದೇಶ್ವರನಿಗೆ ಎಳ್ಳಿನ ಕಣಕ್ಕೆ ಹೋಗುವ ದಾರಿಯನ್ನು ತೋರಿಸುತ್ತಾರೆ. ಅಲ್ಲಿರುವ ರಕ್ಷಣಾ ವ್ಯವಸ್ಥೆಯ ಬಗೆಗೆ ಎಚ್ಚರಿಸುತ್ತಾರೆ. ಎಳ್ಳಿನ ರಾಶಿ ಇರುವ ಕಣಕ್ಕೆ ಮಾದೇಶ್ವರ ಬರುತ್ತಾರೆ. ಕಾಳಮ್ಮ ಬಿಟ್ಟಕಣ್ಣು ಬಿಟ್ಟಹಾಗೆ ಕುಳಿತಿದ್ದಾಳೆ. ಆಗ ಮಾದೇಶ್ವರ ಇವಳ ದೃಢ ಭಕ್ತಿಯನ್ನು ತಿಳಿಯಬೇಕು

ನಾನು ಕೊಟ್ಟ ಸಂಪತ್ತಿನಿಂದ ಸುಖವಾಗಿದ್ದಾಳೆ ಎಂದು ತಿಳಿಯುತ್ತಾನೆ. ಆದರೆ ನಾನು ಈ ವೇಷದಲ್ಲಿ ಹೋದರೆ ಭಿಕ್ಷೆ ನೀಡುವುದಿಲ್ಲ ಎಂದು ತಿಳಿದು ಮುದುಕನಾಗಿ ಹೋಗುತ್ತಾನೆ. ಹಣ್ಣೆ ಹೂವಿನಂತೆ ತಲೆ, ಗೂನುಬೆನ್ನು, ಬೊಚ್ಚು ಬಾಯಿ, ಹರಕು ಜೋಳಿಗೆ, ಕಜ್ಜಿಯಿಂದ ಕೀವು ಸೋರುವ ಮುದುಕನಾಗಿ ಹೋಗುತ್ತಾನೆ. ಕಾಳಮ್ಮ ಭಿಕ್ಷೆ ನೀಡುವುದಿಲ್ಲ ಎಂದು ಅವನಿಗೆ ಈ ಮೊದಲೆ ತಿಳಿದಿರುವುದರಿಂದ, ಇವಳ ಎಳ್ಳು ರಾಶಿಯನ್ನು ನಾಶ ಮಾಡಬೇಕು ಎಂದು, ವಾಯುದೇವನನ್ನು ಕರೆದು ನಾನು ಹೇಳಿದಾಗ ಹೇಳಿದ ಕಡೆ ಬೀಸು ಎನ್ನುತ್ತಾನೆ. ನೊಣಗಳನ್ನು ಕರೆದು ನಾನು ಹೇಳಿದಾಗ ನೀವು ಬರಬೇಕು ಎಯದ ಹೇಳುತ್ತಾನೆ. ಮಾದೇಶ್ವರ ಈ ರೀತಿಯ ಪ್ರಯತ್ನ ಮಾಡಿದ್ದಾನೋ ಇಲ್ಲವೋ ಅಂದರೆ ವಾಯುದೇವ ನೊಣಗಳ ಪ್ರಯೋಗ ಆದರೆ ಜನಪದರು ಮಾತ್ರ ತಮ್ಮ ದೇವನ ಹತ್ತಿರ ಮಾಡಿಸುತ್ತಾರೆ. ಆದರೆ ಮಾದೇಶ್ವರ ಕಾಳಮ್ಮನ ಸಂಪತ್ತನ್ನು ಕುರಿತು ಅವಳಿಗಿರುವ ಅಹಂಕಾರವನ್ನು ಮುರಿಯುತ್ತಾನೆ. ಕಾಳಮ್ಮನ ಬಳಿಗೆ ಭಿಕ್ಷೆಗಾಗಿ ಬರುತ್ತಾನೆ. ಕಂಸಾಳೆನಾದ ಜಂಗೀನ ನಾದವನ್ನು ಮಾಡಿ ಭಿಕ್ಷೆ ಸಾರಿದ್ದಾನೆ. ಆದರೆ ಕಾಳಮ್ಮನಿಗೆ -

"ಭಿಕ್ಷಾ ಅಂದ್ರೆ ಲಕ್ಷ್ಯವಿಲ್ಲ ದಾನವಂದ್ರೆ ಗ್ಯಾನುವಿಲ್ಲ
ತೂಗು ಮಂಚದ ಮೇಲೆ ತೂಗ್ತ ಮನುಗಿದ್ದಾಳೆ"[15]

ಅಂದರೆ ದೇವರ ಬಗೆಗೆ ಅಷ್ಟೊಂದು ಅಸಡ್ಡೆ, ತನಗೆ ಸಿರಿಯನ್ನು ಕೊಟ್ಟ ದೇವರೇ ಬಂದರೂ ಅವಳಿಗೆ ಅದು ತಿಳಿಯದು ಅಷ್ಟು ಅರಿವಿಲ್ಲದವಳಾಗಿದ್ದಾಳೆ. ಆಗ ಮಾದೇಶ್ವರ ಅವಳನ್ನು ಎಚ್ಚರಿಸುವುದಕ್ಕೋಸ್ಕರ ತನ್ನ ಮೈಯ್ಯಲ್ಲಿನ ಕೀವು ಕಜ್ಜಿಯ ವಾಸನೆಯನ್ನು ಅವಳ ಮೂಗಿಗೆ ಬರುವಂತೆ ಮಾಡುತ್ತಾನೆ. ಆಗ ಕಾಳಮ್ಮ ಎಚ್ಚರಗೊಂಡು ಯಾರಲ ಪರದೇಶಿ ಜಂಗಮ ಎಂದು ಮಾದೇಶ್ವರನ ಮೇಲೆ ಜಗಳಕ್ಕೆ ಹೋಗುತ್ತಾಳೆ. ಮನುಷ್ಯನಿಗೆ ಅವಶ್ಯಕತೆಗಿಂತ ಸಂಪತ್ತು ಹೆಚ್ಚಾದರೆ ಅವನಿಗೆ ಗರ್ವ ಉಂಟಾಗುತ್ತದೆ. ಅದೇ ರೀತಿ ಕಾಳಮ್ಮನಿಗೂ ಆಗುತ್ತದೆ. ಮಾದೇಶ್ವರ ಭಿಕ್ಷೆ ಕೇಳಿದರೆ

"ಎಲಾ ಎಲಾ ಪರದೇಸಿ
ಬೆಳ್ಳೀ ಮಾಡ್ನಿಲ್ಲ ಬೆಳಕರೀನಿಲ್ಲ
ನಿಮ್ಮಂತ ತಿರ್ಕೊಂಡು ತಿನ್ನೋರ್ಗೆ ಬಡಾಯ ಬೂಸ್ನ ಜಾಸ್ತಿ
ಇಷ್ಟೋತ್ನಂತೆ ನನ್ನೆಳ್ಳುನ ಕಳುಕೆ ಬಂದಿದ್ದೀಯಲ್ಲ
ನಿನುಗೆ ದಾರಿ ಹೇಳ್ಕೊಟ್ಟೋರು ಯಾರು ಹೇಳು
ನಿನ್ಗೆ ದಾರಿ ಹೇಳ್ದೋರಪ್ಪನ್ಹಟ್ಟಿ
ಹಾಳಾಗ ಅಂತಾಳೆ ಕಾಳಮ್ಮ"[16]

ಅತ್ಯಂತ ಸಂಪತ್ತಿನಿಂದ ಶ್ರೀಮಂತಿಕೆಯಿಂದ ಓಲಾಡುತ್ತಿರುವ ಕಾಳಮ್ಮನಿಗೆ ತನ್ನ ಮಾತಿನಲ್ಲಿ ಮಾನವೀಯತೆಯಲಿ ಸಾತ್ವಿಕತೆಯಾಗಲಿ ಇಲ್ಲ, ಅವಳ ಗರ್ವ ಅತ್ಯಂತ ಹೆಚ್ಚಿನದು ಅವಳ ಮಾತುಗಳೆಲ್ಲವೂ ಅಹಂಕಾರದವು. ಮಾದೇಶ್ವರನನ್ನು ಪರದೇಶಿ ಎನ್ನುತ್ತಾಳೆ. ನಿನಗೆ ದಾರಿ ತೋರಿಸಿದವರ ಅಪ್ಪನ ಹಟ್ಟಿ ಹಾಳಾಗಲಿ ಎಂದು ಶಪಿಸುತ್ತಾಳೆ. ಆಗ ಮಾದೇಶ್ವರ ನಿಜ ಸಂಗತಿಯನ್ನು ಹೇಳುತ್ತಾನೆ. ತನಗೆ ದಾರಿ ತೋರಿಸಿದ್ದು ನಿನ್ನ ಹಿರಿಸೊಸೆ ದ್ಯಾವಾಜಮ್ಮ. ಅವಳ ಅಪ್ಪ ಐಶ್ವರ್ಯದಲ್ಲಿ ಬಾಳುತ್ತಿದ್ದಾನೆ. ಆದರೆ ಸೊಕ್ಕಿನ

ಮಾತಾಡಿ ನೀನು ಇರುವುದನ್ನು ಕಳೆದುಕೊಳ್ಳಬೇಡ ಎನ್ನುತ್ತಾನೆ. ತಾನು ಬಂದಿರುವ ಮುಖ್ಯ ಉದ್ದೇಶವನ್ನು ತಿಳಿಸುತ್ತಾನೆ. ಎಳ್ಳಿನ ಭಿಕ್ಷೆಯನ್ನು ಬೇಡುತ್ತಾನೆ. ತನ್ನ ಸಾಂಸ್ಕೃತಿಕ ಉದ್ದೇಶವಾದ ಆರ್ಥಿಕ ವಿಕೇಂದ್ರೀಕರಣ ಚಿಂತನೆಯನ್ನು ನಿಲುವನ್ನು ಕಾರ್ಯರೂಪಕ್ಕೆ ತರಲು ಶ್ರೀಕಾರ ಹಾಕುತ್ತಾನೆ. ತನ್ನ ಉದ್ದೇಶದ ಕಾರ್ಯಾಚರಣೆಯಲ್ಲಿ ದುಷ್ಟರನ್ನು ಸಂಹರಿಸುವುದರಲ್ಲಿ ಅವನು ಯಾವುದೇ ರಾಜಿಗೂ ಸಿದ್ಧನಿರದೆ ಭಿಕ್ಷೆಯನ್ನು ಕೇಳುತ್ತಾನೆ.

ಆಗ ಬೇವಿನಟ್ಟಿ ಕಾಳಮ್ಮ ಕಡಿಯುವ ನಾಯನ್ನು ಕೂಗುತ್ತಾಳೆ, ಸರ್ಪವನ್ನು ಕೂಗುತ್ತಾಳೆ. ಆದರೆ ಆವೆರಡು ಬಂದಿರುವವನು ಮಾದೇಶ್ವರನಾದುದರಿಂದ ಸುಮ್ಮನಿರುತ್ತವೆ. ಆದರೆ ಕಾಳಮ್ಮ ಅವನಿಗೆ ಬೆಳಗ್ಗ ಬಂದಿದ್ದೀಯ, ಪರದೇಶಿ, ಯಾವ ಊರು ಎಂದು ಜರಿಯುತ್ತಾಳೆ. ಆಗ ಮಾದೇಶ್ವರ ನಿನಗೆ ಭಾಗ್ಯವನ್ನು ಕೊಟ್ಟ ಏಳು ಮಲೆಯ ಮಾದೇಶ್ವರ ಎಂದು ಜ್ಞಾಪಿಸುತ್ತಾನೆ ಆದರೆ ಅವಳಿಗೆ ಅರ್ಥವಾಗುವುದಿಲ್ಲ.

"ತುಂಬುದ ಸ್ವಾಮಾರ ಅಂತ ಕಾಳಮ್ಮ
ನಿನ್ನಳ್ಳಿನ ಕಣುಕ್ಕೆ ಭಿಕ್ಷುಕ್ಕೆ ಬಂದಿವ್ನಿ
ನೀನಾಡುದ ಮಾತ್ನಂತಲೆ
ನಿನ್ನ ಮುತ್ತೈದೆ ಕೈನಿಂದ ಕಂದಮ್ಮ
ಹತ್ತು ಮಾನ ಎಳ್ಳು ತಂದು ಶಿವುನಜವುಳ್ಗೆ ನೀಡುಬುಟ್ಟು
ಹೋಗ್ಬನ್ನಿ ಮಾದೇವ ಅಂತ್ಹೇಳಿ ಕಳುಗು ಬುಟ್ಟಿ
ಈಗಿರು ಭಾಗ್ಯದ ಮೇಲೆ ಮಗಳೆ
ಇನ್ನಷ್ಟು ಭಾಗ್ಯ ಕೊಡುವೆನು"[17]

ಮೊದಲೆ ಹೇಳಿದಂತೆ ಕಾಳಮ್ಮ ಮಾದೇಶ್ವರನಿಗೆ ಎಳ್ಳು ಭಿಕ್ಷೆ ನೀಡಬೇಕು. ಅದಕ್ಕೇ ಮಾದೇಶ್ವರ ಕೇಳುತ್ತಿದ್ದಾನೆ. ಜೊತೆಗೆ ಸಾಂಸ್ಕೃತಿಕವಾಗಿ ಕೂಡ ಸೋಮವಾರ ಮಾದೇಶ್ವರನ ಪಾಲಿಗೆ ವಿಶೇಷ ದಿನ ಏಕೆಂದರೆ ಮೊದಲು ಉತ್ತರಾಜಮ್ಮನ ಬಳಿಯಲ್ಲಿದ್ದಾಗಲೂ ಮತ್ತು ಕೋರಣ್ಯಕ್ಕೆ ವಿಶೇಷವಾಗಿ ಹೋಗುವುದು ಕೂಡ ಸೋಮವಾರ. ಈಗ ಕೂಡ ಮಾದೇಶ್ವರನಿಗೆ ಗುಡ್ಡರನ್ನು ಬಿಡುವುದು ಸೋಮವಾರ. ಇಲ್ಲಿ ಎಳ್ಳನ್ನು ಕೇಳುತ್ತಿರುವುದು ಹತ್ತು ಮಾನದಷ್ಟು ಅವಳು ಬೆಳೆದಿರುವ ಧಾನ್ಯದಲ್ಲಿ ಒಂದು ಭಾಗ. ಆದರೆ ಅವಳಿಗೆ ಇದು ಗಮನಾರ್ಹವಾದ ತನ್ನ ಸಂಪತ್ತಿನ ಬಹುಭಾಗ. ತನ್ನ ಮಹತ್ವವಾಗಲೀ ಸಂಪತ್ತಿನ ಎಳ್ಳಿನ ಬೆಲೆಯಾಗಲೀ ತಿಳಿಯದೇ ಆಡಿರುವ ಅರಿವಿನ ಕೊರತೆಯ ಉದ್ಧಟತನದ ಮಾತು. ಇನ್ನೊಂದು ಅಂಶವೆಂದರೆ ಅವಳ ದೃಷ್ಟಿಯಲ್ಲಿ ಯಕಶ್ಚಿತ್ ಒಬ್ಬ ಭಿಕ್ಷುಕ ಇಷ್ಟು ಸಂಪತ್ತನ್ನು ಎಳ್ಳನ್ನು ನನ್ನ ಬಳಿಯಲ್ಲಿ ಕೇಳುವುದೇ. ಎಳ್ಳಿನ ಮಹತ್ವವಾಗಲೀ ಅದನ್ನು ಬೆಳೆಯಲು ದುಡಿದವರ ಬೆಲೆಯಾಗಲೀ ತಿಳಿಯದೇ ದುಡ್ಡಿಲ್ಲದೆ ಇಷ್ಟು ಭಾಗ ಎಳ್ಳನ್ನು ಅವನು ಕೇಳುತ್ತಾನಲ್ಲ ಎಂಬುದು. ಮಾದೇಶ್ವರನ ಉದ್ದೇಶ ಕೂಡ ಇವಳ ಎಳ್ಳಿನ ಬಹುಭಾಗವನ್ನು ಪಡೆಯುವುದು ಅವಳ ಸಂಪತ್ತಿನ ಶೇಖರಣೆಯನ್ನು ತಪ್ಪಿಸುವುದು. ಬೇವಿನಟ್ಟಿ ಕಾಳಮ್ಮ ಭಿಕ್ಷೆಯನ್ನು ಕೇಳಿದ ಮಾದೇಶ್ವರನನ್ನು ಅಪರಿಮಿತವಾಗಿ ಬಯ್ಯುತ್ತಾಳೆ.

ನೀನುತ್ತಿರೋ ಹೊಲುದಲ್ಲೆ ನಾನೆಳ್ ಬೆಳ್ದಿರೋದ್
ನೀನೇ ಕಣಪ್ಪ ಮೈಮುರ್ದು ದುಡ್ದಿರೋದು
ಎಳ್ ಬೆಳ್ದು ರಾಸ್ಯ ಮಾಡಿರೋನು ನೀನೇಯ ಪರದೇಸಿ
ಬೇವುನ್ಕಾಳಿ ಜೊತೆ ಹೆಚ್ಚೂ ಕಡ್ಮೆ ಮಾತಾಡುದ್ರ
ನಾ ಬಿಡ್ತಕ್ಕಂತ ಮುಂಡ್ಯೆಲ್ಲ
ಆಡಿದ ಮಾತ ವಾಪ್ಸಿ ತಕ್ಕೊಂಡ್ಹು
ಹಿಂದುಕೋಗೋ ಪರದೇಸಿ"[18]

ಎಳ್ಳು ಬೆಳೆಯಬೇಕಾದರೆ ಏನೇನು ಕಷ್ಟಪಟ್ಟಿರುವೆನೆಂದೂ, ನೀನು ಈ ಹೊಲಕ್ಕೆ ಬಂದು ಕಷ್ಟಪಟ್ಟಿದ್ದೀಯ ಎಂದು ಕೇಳುತ್ತಾಳೆ. ತಿರುದು ತಿನ್ನುವ ಪರದೇಸಿಗಳಿಗೆ ಜಂಭ ಬಡಾಯಿ ಹೆಚ್ಚು ಎನ್ನುತ್ತಾಳೆ. ನಾನು ನಿನಗೆ ಎಳ್ಳು ಕೊಡಲು, ನಿನ್ನ ಹೆಂಡತಿ ಅಪ್ಪ ಅಮ್ಮ ನನ್ನ ಹೊಲದಲ್ಲಿ ಬಂದು ದುಡಿದಿದ್ದಾರೆಯೇ? ಎಂದು ಕೇಳುತ್ತಾಳೆ. ನೀನು ಭಿಕ್ಷೆ ಕೇಳಲುಯೋಗ್ಯನಲ್ಲ ಎಂದು ಹೇಳುತ್ತಾಳೆ. ಕೇಳಿದ ಭಿಕ್ಷೆಯ ಮಾತನ್ನು ಹಿಂತೆಗೆದುಕೊಂಡು ಹೋಗು ಎನ್ನುತ್ತಾಳೆ. ಆದರೂ ಮಾದೇಶ್ವರ ಅತ್ಯಂತ ಸಾತ್ವಿಕವಾದ ಮಾತುಗಳಿಂದಲೇ ಅವಳನ್ನು ಕಂದ ಎಂದು ಸಂಭೋಧಿಸಿ ಮುತ್ತೈದೆ ಕೈಯಿನ ಭಿಕ್ಷೆಯನ್ನು ನೀಡು ನಿನಗೆ ಇನ್ನಷ್ಟು ಸಂಪತ್ತು ಕೊಡುವುದಾಗಿ ಹೇಳುತ್ತಾನೆ.

ಇನ್ನಷ್ಟು ಸಂಪತ್ತನ್ನು ಕೊಡುತ್ತಾನೊ ಇಲ್ಲವೊ ಆದರೆ ಈಗ ಇರುವ ಸಂಪತ್ತಿನಲ್ಲಿ ಒಂದಿಷ್ಟು ಭಾಗವನ್ನು ಅವಳಿಂದ ಪಡೆಯುವುದೇ ಮಾದೇಶ್ವರನ ಉದ್ದೇಶವಾಗಿದೆ. ಆ ಮೂಲಕ ಬಂದು ನನಗೆ ಇವಳು ಸೋತರೆ ಅಂದರೆ ಇವಳ ಸಂಪತ್ತಿನ ಒಂದು ಭಾಗ ನನಗೆ ಬಂದರೆ ಮತ್ತೊಂದು ಸಾರಿ ಪಡೆಯುವುದು ಸುಲಭ ಎಂದು ಭಾವಿಸಿದ್ದಾನೆ. ಒಂದು ವೇಳೆ ಭಿಕ್ಷೆ ನೀಡದೆ ಇದ್ದರೆ ಅದಕ್ಕೆ ಮುಂದೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆಯೂ ಯೋಚಿಸಿದ್ದಾನೆ. ಮಾದೇಶ್ವರ ಎಷ್ಟು ಸಾತ್ವಿಕವಾದ ಧಾರ್ಮಿಕವಾದ ಮಾತುಗಳಿಂದ ಕೇಳಿದರೂ ಕೂಡ ಅವಳು ಕೊಡುವುದಿಲ್ಲ. ಹತ್ತು ಮಾನ ಎಳ್ಳು ಕೇಳಲು ಮನಸ್ಸಾದರೂ ಹೇಗೆ ಬಂತು ಈ ಪರದೇಸಿಗೆ ಎಂದು ಹೇಳುತ್ತಾಳೆ. ತನ್ನ ಮನೆ ದೇವರಿಗೆ ಮೀಸಲನ್ನು ತೆಗೆದಿಟ್ಟಿಲ್ಲ ಎಂದು ಕುರುಡು ನೆಪವನ್ನು ಹೇಳುತ್ತಾಳೆ. ಆದರೆ ಈ ಮೊದಲೇ ನೋಡಿದಂತೆ ತನ್ನ ಮನೆದೇವರುಗಳನ್ನೇ ಅವಳು ಹೀಯಾಳಿಸುತ್ತಾಳೆ.

ಈಗ ಹೇಳುತ್ತಿರುವ ಮಾತುಗಳು ಇವನನ್ನು ಕಣದಿಂದ ಹೊರಗೆ ಕಳಿಸಲು ಹೊರತು ಬೇರೆ ಯಾವ ಉದ್ದೇಶವೂ ಅಲ್ಲ. ಭಿಕ್ಷೆಯನ್ನು ಕೊಡದೆ ಹೋಗೆಂದರೆ ಹೋಗುವುದಿಲ್ಲ. ಹಾಗಾಗಿ ಮನೆದೇವರ ಮೀಸಲು ವಿಷಯವನ್ನು ತಿಳಿಸಿದರೆ ಆಗ ಹೋಗುತ್ತಾನೆ. ಇವನ ಕಾಟ ತಪ್ಪುತ್ತದೆ ಎಂದು ಅವಳ ತಿಳುವಳಿಕೆ. ಆದರೆ ಮಾದೇಶ್ವರ ಕೂಡ ಸುಲಭಕ್ಕೆ ಬಿಡುವವನಲ್ಲ. ಆಗ ಮಾದೇಶ್ವರ ಇವತ್ತು ಹೀಗೆ ಮಾತನಾಡುತ್ತೀಯಲ್ಲ ನೀನು ಬೆರಣಿತಟ್ಟಿ, ಹುಲ್ಲನ್ನು ಕುಯ್ದು ಮಾರುತ್ತಿದ್ದಾಗ, ನೀನು ಉಡಲು ಸೀರೆ ಇಲ್ಲದಿರುವಾಗ ಮತ್ತು ನಿನ್ನ ಗಂಡನಿಗೆ ಬಟ್ಟೆ ಇಲ್ಲದಿರುವಾಗ ಒದೆಯಲು ಕಂಬಳಿ ಇಲ್ಲದಿರುವಾಗ ನಿನ್ನ ಮನೆ ದೇವರು ಎಲ್ಲಿ ಹೋಗಿದ್ದ,

ನಿನಗೆ ಭಾಗ್ಯವನ್ನು ಕೊಟ್ಟವನು ನಾನು ಎನ್ನುವುದನ್ನು ಮರೆತ ಎನ್ನುತ್ತಾನೆ, ಆದರೆ ಬೇವಿನಟ್ಟಿ ಕಾಳಮ್ಮ ಮಾದೇಶ್ವರ ಅನ್ನುವುದನ್ನು ಅರಿಯದೆ ನೀನೇನು ವಿಷ್ಣುವೋ, ಬ್ರಹ್ಮನೋ? ನೀನು ನನಗೆ ಭಾಗ್ಯವನ್ನು ಕೊಟ್ಟಿದ್ದರೆ ನನ್ನ ಹತ್ತಿರ ಭಿಕ್ಷಕ್ಕೆ ಯಾಕೆ ಬರುತ್ತಿದ್ದೆ ಎಂದು ಕೇಳುತ್ತಾಳೆ. ಮಾದೇಶ್ವರನಿಗೆ ಅತಿ ಅವಮಾನವಾದಂತಾಗುತ್ತದೆ. ಆಗ ಇವಳ ಅಹಂಕಾರವನ್ನು ಅಡವೀ ಪಾಲು ಮಾಡಬೇಕು ಎಂದು ನಿರ್ಧರಿಸುತ್ತಾನೆ.

"ನಾಳೆ ಅಮಾಸೆ ದಿನದಲ್ಲಿ
ನನ್ನ ಮುದ್ದು ಮಲೆಯಲ್ಲಿ
ನನ್ನ ಹೆಚ್ಚೀಗ ಮಸ್ತಕಕ್ಕೆ
ಅಚ್ಚೆಳ್ಳೆಣ್ಣೆ ಬೇಕವ್ವ
ನೀ ಬೆಳೆದ ಎಳ್ಳೀನ ಎಣ್ಣೆಯು
ನನ್ನ ಮಸ್ತುಕಾಕೆ ಬಿದ್ದಾರೆ
ನಿನ್ನ ಮನೇ ಹಿಡೀದ ಭಾಗ್ಯ ಕೊಡ್ತೀನಿ
ಹತ್ತು ಮಾನೆಳ್ಳ ನೀಡವ್ವ"[19]

ಆದರೆ ಒಂದು ಬಾರಿ ಕೇಳಿ ಅವಳನ್ನು ನಾಶ ಮಾಡಬಹುದಾದರೂ ಅವನಿಗೆ ಅದು ಇಷ್ಟವಿಲ್ಲ. ತನ್ನ ಎಲ್ಲ ಪ್ರಯತ್ನಗಳನ್ನು ಮಾಡಿ ಮುಗಿಸಲು ಮುಂದಾಗುತ್ತಾನೆ. ಎಲ್ಲ ವಿಧಗಳಲ್ಲಿಯೂ ಕೂಡ ಅವಳನನು ಒಪ್ಪಿಸಲು ಪ್ರಯತ್ನಿಸುತ್ತಾನೆ. ಅಮವಾಸೆಯಲ್ಲಿ ಅಭಿಷೇಕ ಮಾಡಲು ಬಳಿಸಿದಾಗ ತನಗೆ ತೃಪ್ತಿಯಾಗುತ್ತದೆ. ನೀನು ಎಳ್ಳು ಬೆಳೆದಿದ್ದಕ್ಕೂ ಸಾರ್ಥಕವಾಗುತ್ತದೆ ಎನ್ನುತ್ತಾನೆ. ನಾನು ನಿನಗೆ ಭಾಗ್ಯ ನೀಡಿದ್ದಕ್ಕೂ ಸಾರ್ಥಕವಾಗುತ್ತದೆ ಎನ್ನುತ್ತಾನೆ. ಆದರೆ ಅವನ ಕೇಳುವಿಕೆಯಲ್ಲಿಯೇ ಗಮನಾರ್ಹ ಭಾಗವನ್ನು ಕೇಳುತ್ತಿದ್ದಾನೆ. ಹಾಗಾಗಿ ಅವನ ಕೇಳುವ ಪ್ರಕ್ರಿಯೆ ಒಬ್ಬ ಸುಧಾರಕನ ಕೇಳುವಂತೆಯೇ ಅವನು ಕೇಳುತ್ತಾನೆ. ಇಲ್ಲಿ ಎರಡು ರೀತಿಯ ಸುಧಾರಣೆಗಳನ್ನು ಎಳ್ಳು ಭಿಕ್ಷೆ ಕೇಳುವುದನ್ನು ಕೇಂದ್ರವಾಗಿಟ್ಟುಕೊಂಡು ಗುರ್ತಿಸಬಹುದು. ಒಂದು ಆರ್ಥಿಕ ಸುಧಾರಣೆ ಇನ್ನೊಂದು ಬೇವಿನಟ್ಟಿ ಕಾಳಮ್ಮನ ಅಹಂಕಾರದ ಉದ್ಧಟತನದ ಸುಧಾರಣೆ. ಇಲ್ಲಿ ಏಕಕಾಲದಲ್ಲಿ ಎಳ್ಳನ್ನು ಪಡೆಯುವದರ ಮೂಲಕ ತನಗೆ ಬೇಕಾದ ವಸ್ತುವನ್ನು ಪಡೆದಂತೆಯೂ ಮತ್ತೊಂದು ಅರ್ಥದಲ್ಲಿ ಪ್ರಮಾಣದಲ್ಲಿ ಹೆಚ್ಚಿರುವುದರಿಂದ ಮೌಲ್ಯಭರಿತವಾದ ದಾನ ಪಡೆದಂತೆಯೂ ಆಗುತ್ತದೆ.

ಮಾದೇಶ್ವರನನ್ನು ಪದೇ ಪದೇ ಹಂಗಿಸಿ ಖಡಾಖಂಡಿತವಾಗಿ ಭಿಕ್ಷೆಯನ್ನು ನೀಡುವುದಿಲ್ಲ ಹೋಗು ಎನ್ನುತ್ತಾಳೆ. ಅವನು ಹತ್ತು ಮಾನ ಎಳ್ಳು ಕೇಳಿದರೆ ಇವಳು ಹತ್ತು ಎಳ್ಳನ್ನೂ ಕೊಡುವುದಿಲ್ಲ ಎನ್ನುತ್ತಾಳೆ. ಆದರೆ ಮಾದೇಶ್ವರ ಕೇಳುವುದನ್ನೂ ಬಿಡುವುದಿಲ್ಲ. ನಿನ್ನ ಮುತ್ತೈದೆ ಸ್ಥಾನ ಸ್ಥಿರವಾಗಲಿ ಎನ್ನುತ್ತಾನೆ. ನಾನು ಕೊಟ್ಟು ಕಿತ್ತುಕೊಳ್ಳುವ ದೇವರಲ್ಲ 'ಶಿವ ಕೊಟ್ಟ ವಿಷ್ಣು ಕಿತ್ತುಕೊಂಡ' ಎಂಬಂತೆ ಆಗುವುದು ಬೇಡ ಎನ್ನುತ್ತಾನೆ. ಆಗ ಕಾಳಮ್ಮ ಗಂಡ ಸತ್ತರೂ ನಿನಗೆ ಎಳ್ಳು ನೀಡುವುದಿಲ್ಲ ಎನ್ನುತ್ತಾಳೆ. ಆಗ ಮಾದೇಶ್ವರ ಅವಳ ಮಾತಿಗೆ ಹೀಗೆನ್ನುತ್ತಾನೆ.

"ಆಹ್ಹಾ ನನಕಂದ ಕಾಳಮ್ಮ
ನಿನ್ನೆ ನಿನ್ನ ಮುತ್ತೈದು ಸ್ಥಾನವೂ ಹೆಚ್ಚಲ್ಲ
ನಿನ್ನ ಗಂಡನ ಪ್ರಾಣವೂ ಹೆಚ್ಚಲ್ಲ
ನಿನ್ನೆ ಅಚ್ಚೆಳ್ಳೆ ಹೆಚ್ಚಾಯ್ತು ಕಾಳಮ್ಮ"[20]

ಪರಿಸ್ಥಿತಿಯ ವಿಷಾದ ಇರುವುದು ಇಲ್ಲಿಯೇ ಇವಳು ತನ್ನ ಹಠಮಾರಿತನದಿಂದ ಗಂಡನನ್ನು ಲೆಕ್ಕಿಸುತ್ತಿಲ್ಲ. ಅವಳಿಗೆ ಗಂಡ ಹೋದರೂ ಎಳ್ಳು ಕೊಡಳು. ಗಂಡ ಕೆಂಡೇಗೌಡನ ದುರಾದೃಷ್ಟ ಇವಳ ಸಿಕ್ಕಿರುವುದು. ಇವರ ಜಗಳಕ್ಕಾಗಿ ಗಂಡನನ್ನು ಬಲಿಪಶುಮಾಡುತ್ತಾಳೆ. ಆದರೆ ಇದನ್ನು ಮಾದೇಶ್ವರ ಗ್ರಹಿಸಿ ಮೇಲಿನ ಮಾತುಗಳನ್ನು ಹೇಳುತ್ತಾನೆ. ಆದರೆ ಮಾದೇಶ್ವರನಿಗೆ ಈ ಬಗ್ಗೆ ಇವಳಲ್ಲಿ ಅಸಹ್ಯ ಹುಟ್ಟುತ್ತದೆ. ಈ ಬಗ್ಗೆ ಮಾದೇಶ್ವರ ಎಚ್ಚರಿಸಿದಾಗಲೂ ಅವಳು ತನ್ನ ನಿಲುವನ್ನು ಇನ್ನಷ್ಟು ಗಟ್ಟಿಗೊಳಿಸುತ್ತಾಳೆಯೇ ಹೊರತು ಬದಲಾಗುವುದಿಲ್ಲ. ಅದರ ದುಷ್ಪರಿಣಾಮದ ಬಗ್ಗೆ ಯೋಚಿಸುವುದಿಲ್ಲ. ಆಗ ಮಾದೇಶ್ವರ 'ನಿನ್ನ ಮುತ್ತೈದೆ ಬಾಯಲ್ಲಿ ಹೇಳಿದಂತೆಯೇ ಮಾಡುತ್ತೇನೆ, ನಿನಗೆ ಹತ್ತುಮಾನ ಕೊಡುವುದು ಕಷ್ಟವಾದರೆ ಒಂಬತ್ತು ಮಾನ ಎಳ್ಳನ್ನು ಕೊಡು ಎಂದು ಹೇಳುತ್ತಾನೆ' ಆಗ ಕಾಳಮ್ಮ

"ನನ್ನ ಗಂಡ ಸತ್ತ ಮೇಲೆ
ನನ್ನ ಎಳೇವಾಲೆ ತಗುದು ಮೆಳೆ ಮ್ಯಾಲೆ ಬೀಸಾಕ್ಬುಟ್ರು ಸರಿಯೆ
ತಾಲಿಕಿತ್ತು ಬೇಲಿ ಮೇಲೆಸುದ್ರೂ ಸರಿಯೆ
ನಾನು ಮುಸ್ಸಂದೆ ಮುಂಡೆಯಾಗಿ
ಏಳೂರು ಬೀದಿಗಾಣೆ ಬತ್ತಿದ್ರೆ
ಮುಂಡೆ ಬತ್ತಳಪ್ಪ ಮುಂಡೆ ಅಂತ
ಮೂರು ಜಗತ್ತು ಕೂಗಿದ್ರೂ ಸರಿಯೆ
ಕೇಳ್ಲಾ ಜಂಗಮ ಎಳ್ಯಾಕೆ ಎಳ್ಳುವ ಮ್ಯಾಗ್ಲ
ದುಂಬ ಕೊಡುವಂತ ಮಗಳಲ್ಲ"[21]

ಎಂದರೆ ಅವಳ ಉದ್ಧಟತನ ಅರ್ಥವಾಗುತ್ತದೆ. ಅತ್ಯಂತ ಅಶುಭ, ಅಪಶಕುನ, ಎಂದು ನಂಬುವ ವಿಧವೆಯ ಪಟ್ಟ ಬಂದರೂ ಎಳ್ಳುದಾನ ನೀಡುವುದಿಲ್ಲ ಎನ್ನುತ್ತಾಳೆ. ಅತ್ಯಂತ ಕೆಟ್ಟ ಯೋಚನೆಯನ್ನು ಮಾಡುತ್ತಾಳೆ ಎಂಬ ಮಾತಿಗೆ ಇದೇ ಉದಾಹರಣೆ. ತನ್ನಿಂದ ತನ್ನ ಗಂಡ ಸಾಯಬಾರದು ಎಂಬ ನಿಲುವು ಇವಳದಲ್ಲ ಮೇಲೆ ಅವಳೇ ಹೇಳಿರುವ ಮಾತುಗಳು ಪ್ರತಿಯೊಬ್ಬ ಸತಿಯು ಅತ್ಯಂತ ನೋವಿನ ದುಃಖದ ಕ್ಷಣಗಳು. ಆದರೆ ಆ ಕ್ಷಣಗಳನ್ನು ಎದುರಿಸಲು ಸಿದ್ಧ. ಬೀದಿಯಲ್ಲಿ ಬರುವಾಗ ಯಾರು ಏನು ಮಾತುಗಳನ್ನು ಆಡಿದರೂ ಕೇಳಿ ಸಹಿಸಿಯಾಳು ಆದರೆ ಎಳ್ಳನ್ನು ಕೊಟ್ಟು ಸಹಿಸಲಾರಳು. ಅಂದರೆ ಅವಳ ಸಂಪತ್ತಿನ ಬಗೆಗಿನ ಅತಿಯಾಸೆ ನಮಗೆ ತಿಳಿಯುತ್ತದೆ. ಹೀಗೆ ಹೇಳಿದಾಗ ಮಾದೇಶ್ವರ ಕೂಡ ಹೀಗೆ ಹೇಳುತ್ತಾನೆ.

"ಸಾಬಾಸ್ ನನಕಂದ ಕಾಳಮ್ಮ
ನಿನ್ನ ಮುತ್ತೈದೆ ಬಾಯ್ನಲ್ಲಿ ಕಡುದ ಮಾತ್ನಂತೆ

ಅದ್ನೂ ಬೇಕಾರ್ ಮಾಡ್ಕೊಡ್ತಿನಿ ನನಕಂದ
ನಿನ್ನ ಗಂಡುನ್ನ ಹುಲೀ ಕುಕ್ಪುಟ್ರೆ
ನನಗೆ ಬರೋ ಭಾಗ್ಯವೇನು ನನಕಂದ"[22]

ಇಲ್ಲಿ ಮುತ್ತೈದೆ ಬಾಯ್ನಲಿ ಆಡಿದ ಮಾತನ್ನು ನಾನು ನಿಜ ಮಾಡುತ್ತೇನೆ ಎಂದು ಮಾದೇಶ್ವರ ಹೇಳುತ್ತಾನೆ. ಅಂದರೆ ಅವಳಿಗೆ ವಿಧವೆ ಪಟ್ಟ ಸಿಗುವುದಾಗಿ ಹೇಳುತ್ತಾನೆ. ಆದರೆ ಇದಕ್ಕೂ ಭಿಕ್ಷೆ ನೀಡುವುದಿಲ್ಲ ಎಂದು ಮಾದೇಶ್ವರನಿಗೂ ಗೊತ್ತು. ಆದರೆ ಹಾಗೆ ಹಿಂದಿರುಗಲು ಬಂದವನಲ್ಲ ಅವಳ ಸಂಪತ್ತು ತೆಗೆದುಕೊಳ್ಳಬೇಕು ಇಲ್ಲವೆ ನಾಶಗೊಳಿಸಬೇಕು ಎಂಬ ಉದ್ದೇಶದಿಂದ ಬಂದವನು. ಆದರೆ ಇಷ್ಟು ಹೆಚ್ಚಳತನದಿಂದ ಮತ್ತು ಗರ್ವದಿಂದ ಮೆರೆಯುವವಳನ್ನು ಕೇವಲ ಒಂದೇ ಬಾರಿಗೆ ನಾಶಮಾಡದೆ ಅವಳು ಏನೇನು ಆಗಲೆಂದು ಬಯಸುತ್ತಾಳೋ ಅದೇ ರೀತಿ ಅವಳಿಗೆ ಕಷ್ಟವನ್ನು ಕೊಟ್ಟು ಮಾದೇಶ್ವರ ನಾಶಮಾಡುತ್ತಾನೆ. ಇದು ಕೇವಲ ಬೇವಿನಟ್ಟಿ ಕಾಳಮ್ಮನಿಗೆ ಮಾತ್ರವೇ ಎಂದು ಯೋಚಿಸದೆ ನಾವು ಇಡೀ ಉಳ್ಳವರ ಸಮುದಾಯಕ್ಕೆ ಇಲ್ಲದವರ ಪರವಾಗಿ ಮಾದೇಶ್ವರ ತೋರುವ ಪ್ರತಿರೋಧ ಸುಧಾರಣೆ ಎಂದು ಅರ್ಥೈಸಬೇಕು. ಆಗ ಆರ್ಥಿಕ ಸುಧಾರಣೆ ಎನ್ನುವ ಪರಿಕಲ್ಪನೆಯ ಸ್ಪಷ್ಟ ಅರ್ಥ ಹೊಳೆಯುತ್ತದೆ. ಇಲ್ಲವಾದರೆ ಇದು ಕೇವಲ ಸಂಗತಿಯಾಗುತ್ತದೆ. ಇದನ್ನು ಸಂಕೇತದಂತೆ ತಿಳಿದು ಇಡೀ ಭೂಮಾಲೀಕರಿಗೆ ಶೋಷಕರಿಗೆ ತಿಳಿಸುವ ಸಂದೇಶದಂತೆ ಎನ್ನಬೇಕು.

ಕಾಳಮ್ಮನ ಹಠ ಉದ್ಧಟತನ ಕಡಿಮೆಯಾಗುವುದಿಲ್ಲ. ಆಗ ಮಾದೇಶ್ವರ ಒಂಬತ್ತು ಮಾನದಿಂದ ತನ್ನ ಭಿಕ್ಷೆಯ ಪ್ರಮಾಣವನ್ನು ಎಂಟು ಮಾನಕ್ಕೆ ಇಳಿಸುತ್ತಾನೆ. ಹೀಗೆ ಎಂಟು ಮಾನ ಎಳ್ಳನ್ನು ಕೊಡು ಎಂದಾಗಲೂ ಕೂಡ ಕಾಳಮ್ಮ ಒಪ್ಪುವುದಿಲ್ಲ. ಆಗ ಮತ್ತೊಂದು ಕೇಡು ಬಯಸುತ್ತಾಳೆ. ಹಾಗೆ ಕೇಡು ಬಂದರೂ ತಾನು ಕೊಡುವುದಿಲ್ಲ ಎನ್ನುತ್ತಾಳೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಶ್ರೀಮಂತನ ಸಂಪತ್ತನ್ನು ಬಡವ ಬಯಸುತ್ತಾನೆ. ಆದರೆ ಒಂದು ಭಾಗವನ್ನು ಅದೂ ಅವಶ್ಯಕತೆಗಾಗಿ ಮಾತ್ರ ವಿಲಾಸಕ್ಕಾಗಿ ಅಲ್ಲ. ಆದರೆ ಅದನ್ನು ನೀಡಲು ಶ್ರೀಮಂತ ನಿರಾಕರಿಸಿದಾಗ ಮತ್ತೆ ಬಡವ ತನ್ನ ಬೇಡಿಕೆಯ ಪ್ರಮಾಣವನ್ನು ಕಡಿಮೆ ಮಾಡುತ್ತಾನೆ. ಆದರೆ ಇನ್ನು ಮುಂದೆ ಬೇಡಿಕೆ ಕ್ರಮೇಣ ಕಡಿಮೆಯಾದಂತೆ ತೋರುತ್ತದೆ. ಇಲ್ಲಿ ಶ್ರೀಮಂತನಿಗೆ ಸಂತೋಷ ಕೊಡುವಂತೆ ಬಡವ ಶ್ರೀಮಂತನ ಮುಂದೆ ಬಗ್ಗುವಂತೆಯೂ ಇದೆ. ಈ ಸನ್ನಿವೇಶ. ಶ್ರೀಮಂತ ತನ್ನ ಇಡೀ ಸಂಪತ್ತು ತನಗುಳಿಯುತ್ತದೆ. ಬಡವ ತನ್ನಿಂದ ಯಾವುದೇ ಸಂಪತ್ತನ್ನೂ ನಿರೀಕ್ಷಿಸದೆ ಕೊನೆಗೆ ಏನೂ ಸಿಕ್ಕುವುದಿಲ್ಲ ಎಂಬ ಖಾತ್ರಿಯೊಂದಿಗೆ ಹಿಂದಿರುಗುತ್ತಾನೆ ಎಂದು ತಿಳಿದಿರುತ್ತಾನೆ. ಆದರೆ ಪರಿಸ್ಥಿತಿ ಸಂಪೂರ್ಣ ವಿರುದ್ಧವಾಗಿರುತ್ತದೆ.

ಅಂದರೆ ಬಡವ ಒಂದು ನಿರ್ದಿಷ್ಟ ಹಂತದವರೆಗೆ ಸಂಪತ್ತು ಉಳ್ಳವರಿಗೆ ಬಗ್ಗುತ್ತಾನೆ. ಆದರೆ ಮುಂದಿನ ಹಂತದಲ್ಲೂ ಶ್ರೀಮಂತನಿಂದ ತನಗೆ ಬೇಕಾದ ಕನಿಷ್ಠ ಸಂಪತ್ತಿನ ಭಾಗವೂ ಸಿಗದಿದ್ದರೆ ಆಗ ಆಕ್ರಮಣ

ಮಾಡುತ್ತಾರೆ. ಉಳ್ಳವರನ್ನು ನಾಶಗೊಳಿಸುತ್ತಾರೆ. ಆದರೆ ಇದರ ಅರಿವು ಉಳ್ಳವರಿಗೆ ಇರುವುದಿಲ್ಲ. ಮೊದಲ ಹಂತದಲ್ಲಿ ಬಡವ ತನ್ನೆದುರಿಗೆ ಕೆಳಗೆ ಬರುತ್ತಿರುವುದು ಕುಗ್ಗುತ್ತಿರುವುದು ತನ್ನ ಮೇಲಿನ ಭಯದಿಂದ ಎಂದು ಭಾವಿಸುತ್ತಾನೆ. ಆದರೆ ಕೊನೆಯಲ್ಲಿ ಪರಿಸ್ಥಿತಿ ಸಂಪೂರ್ಣ ವಿರುದ್ಧವಾಗಿರುತ್ತದೆ. ಆರ್ಥಿಕ ವಿಕೇಂದ್ರೀಕರಣವಾಗದಿದ್ದರೆ ಶ್ರೀಮಂತರ ಇಡೀ ಸಮಾಜ ನಾಶವಾಗುತ್ತದೆ. ಇಲ್ಲವೆ ಉಳಿಯಬೇಕೆಂದರ ತಮ್ಮ ಸಂಪತ್ತಿನ ಗಮನಾರ್ಹ ಭಾಗವನ್ನು ಇಲ್ಲದವರಿಗೆ ಕೊಡಬೇಕಾಗುತ್ತದೆ. ಈ ಇಡೀ ವಿಶ್ಲೇಷಣೆಗೆ ರೂಪಕದಂತೆ ಇರುವುದು 'ಬೇವಿನಟ್ಟಿ ಕಾಳಮ್ಮನ ಸಾಲು ಪಠ್ಯಭಾಗ' ಇದಕ್ಕೆ ವ್ಯಾಖ್ಯಾನದಂತೆ ಇಡೀ ಅಧ್ಯಾಯ ಬಂದಿದೆ.

ಮಾದೇಶ್ವರ ಪ್ರತಿಬಾರಿ ಒಂದೊಂದು ಮಾನ ಎಳ್ಳನ್ನು ಕಡಿಮೆಗೊಳಿಸಿದಾಗಲೂ ಕೂಡ ಕಾಳಮ್ಮ ಮತ್ತೊಂದು ಕೇಡನ್ನು ಬಯಸಿ ಕೇಡಾದರೂ ಎಳ್ಳು ದಾನ ನೀಡುವುದಿಲ್ಲ ಎನ್ನುತ್ತಾಳೆ. ಹೀಗೆ ಬಯಸಿದ ಕೇಡುಗಳೆಲ್ಲವನ್ನು ತರುವುದಾಗಿ ಮಾದೇಶ್ವರ ಹೇಳಿದರೂ ಕೂಡ ಎಚ್ಚೆತ್ತುಕೊಳ್ಳದೆ ಅವನಿಗೆ ಭಿಕ್ಷೆಯನ್ನು ಕೊಡದೆ ಅವಳು ಜಗಳವಾಡುತ್ತಾಳೆ. ತಮ್ಮ ಮನೆಯಲ್ಲಿರುವ ಸಂಪತ್ತು ಎಷ್ಟು ಬೆಳೆಯುತ್ತಿದ್ದರೂ ಕಾಳಮ್ಮನಿಗೆ ಅದು ತೃಪ್ತಿ ನೀಡುವುದಿಲ್ಲ. ಪ್ರತಿ ಬಾರಿಯು ಕಾಳಮ್ಮ ನನ್ನ ಎಲ್ಲ ಎಮ್ಮೆ ದನಗಳು ಸತ್ತರೂ, ಕುರಿಗಳ ಹಿಂಡು ನಾಶವಾದರೂ ಕೊಡುವುದಿಲ್ಲ ಎನ್ನುತ್ತಾಳೆ. ಮತ್ತೊಮ್ಮೆ ಹೀಗೆ ಹೇಳುತ್ತಾಳೆ ತನ್ನ ಮಕ್ಕಳೆಲ್ಲರೂ ಹಳ್ಳದಲ್ಲಿ ಸಾಲು ಸಮಾಧಿಯಾದರೂ ಸರಿಯೆ, ತನ್ನ ಏಳು ಸೊಸೆಯರು ವಿಧವೆಯಾದರೂ ಸರಿಯೇ ನಾನು ಎಳ್ಳು ನೀಡುವುದಿಲ್ಲ ನೀನು ಈ ಕಣವನ್ನು ಬಿಟ್ಟು ಹೋಗು ಎನ್ನುತ್ತಾಳೆ. ಆದರೆ ಮಾದೇಶ್ವರ ತನ್ನ ಬೇಡಿಕೆಯನ್ನು ಮತ್ತೆ ಮಂಡಿಸುತ್ತಾನೆ. ಆಗ ತನ್ನ ಮೊಮ್ಮಕ್ಕಳು, ಮರುಮಕ್ಕಳು ಎಲ್ಲರೂ ಅನೇಕ ರೋಗಗಳಿಗೆ ಬಲಿಯಾಗಿ ಸತ್ತರೂ ಸರಿ ಅವರಿಗೆ ಕೂಳು ಮಾಡಿದರೂ ಸರಿಯೇ ಎಳ್ಳನ್ನು ನೀಡುವುದಿಲ್ಲ ಎನ್ನುತ್ತಾಳೆ. ಅಂದರೆ ಅವಳು ಎಲ್ಲವನ್ನು ಬಿಟ್ಟರೂ ಕಳೆದುಕೊಂಡರೂ ಕೂಡ ಭಿಕ್ಷೆಯನ್ನು ನೀಡಳು ಸಂಪತ್ತಿನಲ್ಲಿ ಸ್ವಲ್ಪ ಕಡಿಮೆಯಾದರೂ ಸಹಿಸುವುದಿಲ್ಲ. ಮಾದೇಶ್ವರ ತನ್ನ ಬೇಡಿಕೆಯ ಪ್ರಮಾಣವನ್ನು ಮತ್ತೂ ಇಳಿಸುತ್ತಾನೆ. ಆದರೆ ಅದನ್ನೂ ಒಪ್ಪದೆ ಕಾಲಮ್ಮ ಏಳು ಮಂದಿ ಸೊಸೆಯರೂ ಗರ್ಭಿಣಿಯರು ಅವರು ಪರಸ್ಪರ ಬಡಿದಾಡಿ ಸತ್ತರೂ ಏಳು ಜನಕ್ಕೂ ಸಾಲಾಗಿ ಸಮಾಧಿ ಕಟ್ಟಿಸಿದರೂ ಚಿಂತೆ ಇಲ್ಲ ಆದರೆ ಎಳ್ಳನ್ನು ಕೊಡುವುದಿಲ್ಲ ಎನ್ನುತ್ತಾಳೆ. ಎಪ್ಪತ್ತೇಳು ಜೀತಗಾರರೂ ಕಲ್ಲಾಗಿ ಹೋದರೂ ಚಿಂತೆ ಇಲ್ಲ ಬೇವುನಹಟ್ಟಿ ಒಳಗೆ ಏಳು ಕೊಪ್ಪುಗೆ ದ್ರವ್ಯ ಇದೆ. ಅದೆಲ್ಲವನ್ನೂ ಕಳ್ಳರು ಹೊತ್ತುಕೊಂಡೋದರು ಸರಿ ಕೊಡುವುದಿಲ್ಲ ಎನ್ನುತ್ತಾಳೆ. ಆಗ ಮಾದೇಶ್ವರ ಅವಳಿಗ ಬುದ್ಧಿ ಹೇಳುತ್ತಾನೆ.

"ಇಂತೆ ಹಟವನ್ನು ಮಾಡಿ ಕೆಡುಬ್ಯಾಡ ತಾಯಿ
ಹಟಾಮಾಡಿ ಹಲ್‌ಮುರುಸ್ಕೊಂಡುಂಗಾಗ್ಬೇಡ ನನಕಂದ
ಕೊಟ್ಟು ಕೆಟ್ಟೋರಿಲ್ಲ ಇದ್ದೋರಿಲ್ಲ ನನಕಂದ"[23]

ಆದರೆ ಕಾಳಮ್ಮ ಹಳ್ಳಕೊಳ್ಳವೆಲ್ಲ ಬಂದು ಎಳ್ಳು ಕೊಚ್ಚಿ ಹೋದರೂ ಸರಿಯೇ ಕೊಡುವುದಿಲ್ಲ ಎನ್ನುತ್ತಾಳೆ.

"ನನ್ನಟ್ಟಿ ಧಗ್ಗನೆ ಕತ್ತಿ ಧಿಗ್ನೆ ಉರುದೋದ್ರೂ ಸರಿಯೇ
ನಾನು ಹೋಗಿ ಆ ಹಟ್ಟಿ ಬೇಯದ ನೋಡಕೆ ನಿಂತ್ಕೊಂಜ್ರೂ ಸರಿಯೆ
ಆನೆಗಾತ್ರದ ಕಿಡಿಹಾರ್‍ಬಂದು
ನನ್ನ ಅರವತ್ತೊಳದ ಸೀರೆ ಮೇಲೆ ಕೂತ್ರೂಸರಿಯೆ
ಕುದ್ರೆ ಗಾತ್ರದ ಕಿಟಿ ಕುಪ್ಪುಸಿ ಬಂದು
ನನ್ನ ಕುಪ್ಸ ಸುಟ್ಟೊದ್ರೂ ಸರಿಯೆ
ಉಡೋಕೆ ಬಟ್ಟೆ ಇಲ್ದೇ ಹೋದ್ರೂ ಸರಿಯೆ
ನಾನು ನಿನ್ಗೆ ಒಂದ್ ಕಡುದ್ನಾಳ ಕೊಡೋಳಲ್ಲ ಜಂಗಮ"[24]

ಈ ಮೇಲಿನ ಮಾತುಗಳಲ್ಲಿ ಅವಳ ಹಠಮಾರಿತನ ಮಾದೇಶ್ವರನ ಮಾತನ್ನು ಮನ್ನಿಸದಿರುವ ದಿಟ್ಟತನ ಅಹಂಕಾರ ಶ್ರೀಮಂತಿಕೆಯ ಗರ್ವ, ಉಡಲು ಸೀರೆ ಇಲ್ಲದೆ ನಿರ್ವಾಣದಲ್ಲಿ ಕುಂತರೂ ಸರಿ ಭಿಕ್ಷೆ ನೀಡುವುದಿಲ್ಲ ಎನ್ನುತ್ತಾಳೆ. ಅವಳ ಛಲ ನಿಜಕ್ಕೂ ದಂಗು ಬಡಿಸುವಂತಹದ್ದು. ಆದರೆ ಆ ಛಲ ಸ್ವಾಭಿಮಾನದಿಂದ ಬಂದಿರದೆ ಶ್ರೀಮಂತಿಕೆಯ ಅಹಂಕಾರದಿಂದ ಬಂದಿರುವುದಾಗಿದೆ. ಈ ಬಗೆಯ ಅಹಂಕಾರ ನಾಶಮಾಡುವುದೇ ಮಾದೇಶ್ವರನ ಉದ್ದೇಶ. ಹಾಗೆಯೆ ಸಂಪತ್ತಿನ ನಾಶವೂ ಆಗಿದೆ. ಇಲ್ಲಿ ಕಾಳಮ್ಮ ಎಲ್ಲ ಸಿರಿವಂತರ ಪ್ರತಿನಿಧಿಯಾಗಿದ್ದಾಳೆ. ಮಾದೇಶ್ವರ ಇಂತಹ ವ್ಯಕ್ತಿಗಳ ಸಮಾಜದ ಸಂಸ್ಕೃತಿಯನ್ನು ನಾಶಗೊಳಿಸಿ ಸರ್ವಸಮಾನತೆಯ ಸಮಾಜ ರೂಪಿಸಲು ಆಶಿಸುತ್ತಾನೆ.

ಮಾದೇಶ್ವರ ಬೇಡುವುದನ್ನೇನು ನಿಲ್ಲಿಸಲಿಲ್ಲ. ಆಗ ಕಾಳಮ್ಮ ಎಳ್ಳಿನ ರಾಶಿಗೆ ಹಾಕಿದ್ದ ಮೆರಕಡ್ಡಿಯನ್ನು ಜಡುದು ಕಿತ್ತುಕೊಂಡು, ಸೀರೆಯನ್ನು ಕಾಸಿ ಕಟ್ಟಿಗೊಂಡು, ಹಲ್ಲು ಕಡಿದುಕೊಂಡು ಮಾದೇಶ್ವರನನ್ನು ಹೊಡೆಯಲು ಬರುತ್ತಾಳೆ. ಆದರೆ ಅವಳ ಹೊಡೆತಕ್ಕೆ ಸಿಕ್ಕದಂತೆ ಮಾದೇಶ್ವರ ಎಳ್ಳಿನ ರಾಶಿಯ ಸುತ್ತಾ ಸುತ್ತುತ್ತಾನೆ. ಆದರೆ ಕಾಳಮ್ಮ ಮೆರಕಡ್ಡಿಯಲ್ಲಿ ಬೀಸುತ್ತಾಳೆ. ಆಗ ಮಾದೇಶ್ವರ ಎಳ್ಳಿನ ರಾಶಿಯ ಮೇಲೆ ಬೀಳುತ್ತಾನೆ. ನಂತರ ಸತ್ತಂತೆ ಬಾಯಲ್ಲಿ ರಕ್ತ ಕಾರುತ್ತಾನೆ ಬೀಳುತ್ತಾನೆ. ಆಗ ನೊಣಗಳೆಲ್ಲ ಬಂದು ಮುತ್ತಿಕೊಳ್ಳುತ್ತವೆ. ಆಗ ದೇಹದಿಂದ ಕೆಟ್ಟ ವಾಸನೆಯೂ ಬರುತ್ತದೆ. ಅನ್ಯಾಯವಾಗಿ ಸತ್ತುಹೋದ ಯಾರಾದರೂ ಹೋಗಿ ಹೇಳಿ ತನ್ನ ಬಂಧನವಾದರೆ ಏನು ಗತಿ ಎಂದು ಚಿಂತಿಸುತ್ತಾಳೆ.

ನಂತರ ಅವಳು ಮೊದಲು ಏನೇನು ಕೇಡನ್ನು ಬಯಸಿದ್ದಳೋ ಎಲ್ಲವೂ ಅದೇ ರೀತಿಯಾಗುತ್ತದೆ. ಗಂಡ ಹುಲಿಯ ಬಾಯಿಗೆ ಸಿಕ್ಕಿ ಸಾಯುತ್ತಾನೆ. ಕಾಳಮ್ಮನಿಗೆ ನಾಲಿಗೆ ಬೀಳುತ್ತದೆ. ಆದರೆ ಕಣದಲ್ಲಿ ಬಿದ್ದಿರುವ ಮಾದೇಶ್ವರನನ್ನು ಪೂಜಿಸಿ ದ್ಯಾವಾಜಮ್ಮ ಒಲಿಸಿಕೊಳ್ಳುತ್ತಾಳೆ. ಆಗ ದ್ಯಾವಾಜಮ್ಮ ನನ್ನ ಅತ್ತೆಯ ತಪ್ಪನ್ನು ಕ್ಷಮಿಸಬೇಕೆಂದು ಹೇಳುತ್ತಾಳೆ. ಆದರೆ ಮಾದೇಶ್ವರ ಅದಕ್ಕೆ ಒಪ್ಪದೆ,

"ಅಂಕಾರ ಪಟ್ರೋರ್‍ನ ಅರಗಳ್ಗೆ ಈ ಧರೆಮ್ಯಾಲೆ ಮಡುಗುವಂತಾ
ದೇವ್ರಲ್ಲ ನಾನು

ಅವಳ ಧುನಿಯಾವನ್ನು ಧೂಳೀಪಟ ಮಾಡ್ದೆ ಹೋದ್ರೆ
ನನ್ಗೆ ಏಳ್ಮಲೆ ಮಾದೇವ ಅನ್ನುವಂತ ಛಲ ಯಾಕ್ಬೇಕು ನನ ಕಂದ
ಇಂತೇವು ಈ ಧರೆಯ ಮೇಲೆ ಹುಟ್ಕೊಂಡ್ರೆ
ಜಗತ್ಯದಲ್ಲಿ ನ್ಯಾಯ ಅನ್ನೋದು ನಿಲ್ಲಕಿಲ್ಲ
ಸತ್ಯ ಅನ್ನೋದು ಸತ್ತೋಯ್ತದೆ ಕಂದಮ್ಮ
ನಿಮ್ಮತ್ತೆ ಐಸ್ಪುರಿ ಇಂದ್ಗೆ ಸೈ ಕಾಣವ್ವ"[25]

ಅಹಂಕಾರ ಪಟ್ಟವರಿಗೆ ಹೇಳಿದಂತೆ ನಡೆದುಕೊಳ್ಳದವರಿಗೆ ಈ ಗತಿ ಬರುತ್ತದೆ ಎಂದು ಮಾದೇಶ್ವರ ಹೇಳುತ್ತಾನೆ. ಸಂಪತ್ತಿನ ಅತಿ ಮದದಿಂದ ಕೊಬ್ಬಿದವರಿಗೆ ಈ ಗತಿ ತರುವುದಾಗಿ ಹೇಳುತ್ತಾನೆ. ಇಂತಹವರೇ ಧರೆಯ ಮೇಲೆ ಹುಟ್ಟಿಕೊಂಡರೆ ನ್ಯಾಯ ಅನ್ನುವುದು ಇರುವುದಿಲ್ಲ ಎನ್ನುತ್ತಾನೆ. ಅಂದರೆ ಅಹಂಕಾರಿಗಳು. ಸಂಪತ್ತಿನ ಕ್ರೋಢೀಕರಣದಲ್ಲಿ ತೊಡಗಿರುವವರು, ಬಡವರನ್ನು, ದುಡಿಯುವ ವರ್ಗವನ್ನು ಶೋಷಿಸುವವರು, ಆರ್ಥಿಕವಾಗಿ ಬಲಾಢ್ಯರಾಗಿದ್ದು ಇತರರಿಗೆ ಅದನ್ನು ಹಂಚದಿರುವವರು. ತಮ್ಮಷ್ಟೆ ತಾವೇ ಐಶ್ವರ್ಯದಿಂದಿರುವವು, ದಾನ ಧರ್ಮ ಎಂಬುದಕ್ಕೂ ಕೊಡದಿರುವವರು. ಬದುಕಲು ಅರ್ಹರಲ್ಲ ಎಂದು ಹೇಳುತ್ತಾನೆ. ಮಾದೇಶ್ವರ ಇಂತಹ ಕೆಲವು ಸನ್ನಿವೇಶಗಳಲ್ಲಿ ತುಂಬ ಮಹತ್ವದ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾನೆ. ಅವುಗಳನ್ನೇ ನಾವು ಸಾಂಸ್ಕೃತಿಕವಾಗಿಯೂ ಗುರುತಿಸಬಹುದು. ಮನುಷ್ಯನ ಜೀವನವೇ ಒಂದು ಸಂಸ್ಕೃತಿ. ಈ ಜೀವನದ ಬಗೆಗೆ ವ್ಯವಸ್ಥೆಯ ಬಗೆಗೆ ತಳೆಯುವ ನಿರ್ಧಾರಗಳು ಹೆಚ್ಚು ಪ್ರಸ್ತುತವಾಗಿರಬೇಕೆಂದು ಸಮಾಜ ಬಯಸುತ್ತದೆ. ಸಮಾಜದಲ್ಲಿ ಬಡವರಂತೆ ಶ್ರೀಮಂತರೂ ಇರುತ್ತಾರೆ. ಹಾಗಾಗಿ ಅವರ ಬಗ್ಗೆ ತಿಳಿದು ಅವರ ಶೋಷಣೆಯ ಆರ್ಥಿಕ ಕೇಂದ್ರೀಕರಣದ ಬಗೆಗೆ ಆಕ್ಷೇಪವೆತ್ತಿ ತೆಗೆದುಕೊಳ್ಳುವ ನಿಲುವುಗಳು ಹೆಚ್ಚು ಸಮಾಜಮುಖಿಯಾಗಿರುತ್ತವೆ. ಹೀಗಾಗಿ ಇಲ್ಲಿ ಬರುವ ಬೇವಿನಟ್ಟಿ ಕಾಳಮ್ಮನ ಬಗೆಗಿನ ಮಾದೇಶ್ವರನ ಧೋರಣೆಯನ್ನು ಹೀಗೆ ಅರ್ಥೈಸಬಹುದು. ಸಂಪತ್ತನ್ನು ಈಗಾಗಲೇ ಗಳಿಸಿರುವ ಕಾಳಮ್ಮ ಇನ್ನೂ ಗಳಿಸಲು ತವಕಿಸುತ್ತಾಳೆ. ಜೀನಳಾಗಿ ಇರುವೆಗಳಿಗೂ ಕಾಟ ಕೊಟ್ಟವಳು ಸಂಪತ್ತಿನ ಕ್ರೋಢೀಕರಣದಲ್ಲಿ ತೊಡಗಿರುವಳು. ಹೀಗೆ ತೊಡಗಿರುವವರು ವಿರುದ್ಧವಾದ ಕಾರ್ಯಾಚರಣೆಯನ್ನು ನಡೆಸುವವನು ಮಾದೇಶ್ವರ. ಈ ಬಗ್ಗೆ ಕಾರ್ಯಾಚರಣೆೇಮುಂದಾಗುವುದೇ ಆರ್ಥಿಕ ಕೇಂದ್ರೀಕರಣದ ಅವನ ನಿಲುವನ್ನು ಹೇಳುತ್ತದೆ. ಕಾಳಮ್ಮ ಆರ್ಥಿಕವಾಗಿ ಸದೃಢವಾಗಿರುವುದರಿಂದ ತಾನು ಏನು ಹೇಳಿದರೂ ತಪ್ಪಿಲ್ಲ ಎಂದು ತಿಳಿಯುತ್ತಾಳೆ. ಆ ಮೂಲಕ ಭಿಕ್ಷೆ ಕೇಳಲು ಬಂದ ಮಾದೇಶ್ವರನಿಗೆ ಬಯ್ಯುತ್ತಾಳೆ. ಅಂದರೆ ಅವಳು ಹಕ್ಕಿ ಪಕ್ಷಿಗಳಿಗೂ ಇರುವೆಗಳಿಗೂ ಹೀನವಾಗಿ ಬಯ್ಯುತ್ತಾಳೆ ಮತ್ತು ಅವುಗಳಿಂದ ತನ್ನ ಸಂಪತ್ತನ್ನು ರಕ್ಷಿಸಿಕೊಳ್ಳುತ್ತಾಳೆ. ಹೀಗೆ ಹಣದ ಕೇಂದ್ರೀಕರಣಕ್ಕೆ ತೊಡಗಿರುತ್ತಾಳೆ. ಜೀತಗಾರರಿಗೆ ಸರಿಯಾಗಿ ಊಟ ಹಾಕುವುದಿಲ್ಲ. ಹೀಗಾಗಿ ಅವಳು ನಾಶವಾಗುತ್ತಾಳೆ. ಅಂದರೆ ಅವಳಿಗೆ ಅಹಂಕಾರ ತುಂಬಿ ತುಳುಕುತಿತ್ತು. ಆಗ ಮಾದೇಶ್ವರ ತನ್ನ ಶಕತಿಯಿಂದ ಅವಳನ್ನು ನಾಶಮಾಡಿದ. ಜೊತೆಗೆ ಅವಳು ಅಹಂಕಾರದಿಂದ ತನಗೆ ಯಾವಕೇಡುಗಳೂ ಬರುವುದಿಲ್ಲ ಎಂದು ತಿಳಿದು ಕೇಡುಗಳನ್ನು ಹೇಳಿಕೊಳ್ಳುತ್ತಾಳೆ. ತನಗೇ ಕೇಡುಗಳೇ ಬರುವುದಿಲ್ಲ ಎಂದು ಮಾತನಾಡುತ್ತಾಳೆ.

ಆರ್ಥಿಕ ವಿಕೇಂದ್ರೀಕರಣಕ್ಕೆ ಸಂಬಂಧಿಸಿದಂತೆ ಪ್ರಮುಖ ನಿರ್ಧಾರಗಳನ್ನು ಮಾದೇಶ್ವರ ತೆಗೆದುಕೊಳ್ಳುತ್ತಾನೆ. ಮೊದಲು ಕಾಳಮ್ಮನಿಗೆ ಸಂಪತ್ತಿನ ಇಂತಿಷ್ಟು ಭಾಗವನ್ನು ಕೊಡು ಎಂದು ಹೇಳುತ್ತಾನೆ. ಆದರೆ ಅವಳು ಒಪ್ಪದಿದ್ದಾಗ ಸಂಪತ್ತಿನ ಮೇಲಿನ ಆಸೆಯಿಂದ ಇರುವುದರಿಂದ ಅವಳನ್ನು ಸಂಪೂರ್ಣ ನಾಶಮಾಡುತ್ತಾನೆ.

ಸಿ. ನಾಗಣ್ಣ ಅವರು ಬೇವಿನಟ್ಟಿ ಕಾಳಮ್ಮನ ಪಠ್ಯಭಾಗವನ್ನು ಕುರಿತು ಹೇಳಿರುವ ಮಾತು ನಾನು ಗ್ರಹಿಸಿರುವಂತೆಯೇ ಇದೆ. ಅವರ ಮಾತುಗಳನ್ನು ಉದ್ಧರಿಸುವುದಾದರೆ "ಸಿರಿ ಸಂಪತ್ತು ಒಂದೇ ಕಡೆ ಶೇಖರವಾಗಬಾರದು. ಹಾಗೆ ಆದರೆ ಅಪಾಯ ಖಂಡಿತ ಎಂಬ ಸಂದೇಶವೂ ಕೂಡ ನಮಗೆ 'ಬೇವಿನಟ್ಟಿ ಕಾಳಮ್ಮ'ನ ಪ್ರಸಂಗದ ಮೂಲಕ ತಿಳಿಯುತ್ತದೆ. ಒಬ್ಬ ವ್ಯಕ್ತಿಯಲ್ಲಿ ಸಂಗ್ರಹವಾದ "ವೆಲ್ತ್" "ಕಾಮನ್ ವೆಲ್ತ್" ಆಗಿ ಮರಳಿ ಸಮಾಜಕ್ಕೇ ಹರಿದು ಬಂದಾಗ ಮಾತ್ರ ಸಮುದಾಯದಲ್ಲಿ ಸ್ವಾಸ್ಥ್ಯ ನೆಲೆಸುವುದು, ಸಮತೋಲನ ಏರ್ಪಡುವುದು. ಇಲ್ಲವಾದರೆ ಉಳ್ಳವರು ವಿಪರೀತ ಅಹಂಕಾರದಲ್ಲಿ ಮೆರೆಯುತ್ತಾರೆ. ಇಲ್ಲದವರು ಸಾಮಾನ್ಯ ಸುಖದಿಂದಲೂ ವಂಚಿತರಾಗುತ್ತಾರೆ. ಬೆಳೆದದ್ದನ್ನೆಲ್ಲ ತುಂಬಿಕೊಂಡು ಇರುವೆಗೂ ಒಂದು ಕಾಳು ಬಿಡದಂಥ ಬೇವಿನ ಕಾಳಮ್ಮನನ್ನು ಕವಿ ವರ್ಣಿಸುವ ರೀತಿಯಲ್ಲಿ ಅದ್ಭುತವಾದ ವ್ಯಂಗ್ಯವಿದೆ. ಸಾಮಾಜಿಕ ವಿಡಂಬನೆ ಇದೆ. ಬೇವಿನ ಕಾಳಮ್ಮನ ವಿಷಯದಲ್ಲಿ ಮಾದೇಶ್ವರರು ಹೆಚ್ಚು ಉಗ್ರವಾಗುವುದೇಕೆಂದರೆ ಅವಳೇ ಒಂದು ಕಾಲದಲ್ಲಿ ನಿರ್ಗತಿಕಳಾಗಿದ್ದವಳು. ಸಿರಿಯನ್ನು ಕರುಣಿಸಿದ ದೊರೆ ಪರೀಕ್ಷೆಗೆ ಬಂದಾಗ ಅನಂತ ಗರ್ವದಲ್ಲಿ ಕಾಳಮ್ಮ ಸರ್ವವನ್ನೂ ಮರೆತು ಓಲಾಡುವಾಗ ಅವಳನ್ನು ಜಾಲಾಡಲು ಮಾಯ್ಕಾರ ಮುಂದಾಗುವುದರಲ್ಲಿ ಅರ್ಥವಿದೆ. ನಮ್ಮ ರಾಷ್ಟ್ರದ ಸಂದರ್ಭದಲ್ಲಿಯೂ ಸಹ ಉಳ್ಳವರು ತಮ್ಮ ಡೊಳ್ಳನೊಳಗೇ ಎಲ್ಲವನ್ನೂ ಅಡಗಿಸಿಕೊಂಡು ಕುಳಿತಿರುವುದರಿಂದ ಸಮಾಜದ ಆಯತಪ್ಪುತ್ತದೆ ಎಂದು ಮಾದೇಶ್ವರರ ನಂಬಿಕೆ."[26]

ಹೀಗೆ ಒಂದು ಸಮುದಾಯದ ಜೀವನ ವಿಧಾನವನ್ನು ನಿಯಂತ್ರಿಸುವಲ್ಲಿ ಮತ್ತು ಉನ್ನತಿಗೇರಿಸುವಲ್ಲಿ ಮಾದೇಶ್ವರ ಆರ್ಥಿಕ ಸಮಸ್ಯೆಗಳನ್ನು ಗಮನಿಸಿ ಹಣದ ಏಕಮುಖತೆಯ ಹರಿವಿನ ಬಗ್ಗೆ ಎಚ್ಚರ ವಹಿಸುತ್ತಾನೆ.

# ಅಡಿಟಿಪ್ಪಣಿ

1. ರಾಜಶೇಖರ ಪಿ.ಕೆ. (ಸಂ) ಮಲೆಯ ಮಾದೇಶ್ವರ ಸಂ-2, ಮು 2006 ಪುಟ - 742-743
2. ಅದೇ ಪುಟ 743
3. ಅದೇ ಪುಟ 747
4. ಅದೇ ಪುಟ 749
5. ಅದೇ ಪುಟ 773
6. ಅದೇ ಪುಟ 774
7. ಅದೇ ಪುಟ 776
7. ಅದೇ ಪುಟ 778
8. ಅದೇ ಪುಟ 780
9. ಅದೇ ಪುಟ 781-782
10. ಅದೇ ಪುಟ 784
11. ಅದೇ ಪುಟ 787
12. ಅದೇ ಪುಟ 789
13. ಅದೇ ಪುಟ 789
14. ಅದೇ ಪುಟ 804
15. ಅದೇ ಪುಟ 820
16. ಅದೇ ಪುಟ 822
17. ಅದೇ ಪುಟ 826
18. ಅದೇ ಪುಟ 827
19. ಅದೇ ಪುಟ 829
20. ಅದೇ ಪುಟ 832
21. ಅದೇ ಪುಟ 835
22. ಅದೇ ಪುಟ 835
23. ಅದೇ ಪುಟ 844
24. ಅದೇ ಪುಟ 845
25. ಅದೇ ಪುಟ 867
26. ನಾಗಣ್ಣ .ಸಿ (ಲೇಖನ) ಮಹದೇಶ್ವರರ ಪಾತ್ರಗಳ ನೆಲೆಗಳು, ಅರವಿಂದ ಮಾಲಗತ್ತಿ (ಸಂ) ಮಲೆಯ ಮಾದೇಶ್ವರ, ಮೈ.ವಿ.ವಿ. ಮೈ ಮು 2000 ಪು 154

# ಅಧ್ಯಾಯ - 5
# ದೈವದ ಕಡೆಗೆ ಗಮನ

ಬುಡಕಟ್ಟು ಜನರಿಗೆ ಧಾರ್ಮಿಕತೆಯ ಸ್ಪರ್ಶ ನೀಡಿದ ಗೌರವ ಮಾದೇಶ್ವರನಿಗೆ ಸಲ್ಲುತ್ತದೆ. ಬುಡಕಟ್ಟು ಸಮುದಾಯದವರು ತಮ್ಮ ಕಸುಬುಗಳು ಜೊತೆಗೆ ಕೃಷಿ ಇದರಲ್ಲಿ ಮಗ್ನರಾಗಿರುತ್ತಾರೆ. ಅಂತಹ ಸಂದರ್ಭದಲ್ಲಿ ಮಾದೇಶ್ವರ ಅವರಿಗೆ ದೇವರು ಧರ್ಮ ಇವುಗಳ ಪರಿಚಯ ಪ್ರಾಮುಖ್ಯತೆ ನೀಡುತ್ತಾನೆ. ಮುಖ್ಯವಾಗಿ ಮಾದೇಶ್ವರ ಬರುವ ಹೊತ್ತಿಗೆ ದೇವರು ಧರ್ಮಗಳ ಬಗ್ಗೆ ತಿಳಿದಿದ್ದರೂ ಅಷ್ಟೇನೂ ಜಾಗೃತಿ ಇರಲಿಲ್ಲ. ಮುಖ್ಯವಾಗಿ ಅವರು ಗಮನಿಸುತ್ತಿರಲಿಲ್ಲ. ಏಕೆಂದರೆ ಅವರಿಗೆ ಕೃಷಿಯ ಬದುಕೆ ಮುಖ್ಯವಾಗಿತ್ತು. ಆಗ ಮಾದೇಶ್ವರ ಅವರ ಜೀವನ ವಿಧಾನದಲ್ಲಿ ದೇವರು ಅವಿಭಾಜ್ಯ ಅಂಗ ಎಂಬುದಾಗಿ ಪ್ರತಿಯೊಬ್ಬರಿಗೂ ಮನವರಿಕೆ ಮಾಡಿಸಿ, ಧರ್ಮದ ಕಡೆಗೆ ಅವರ ಗಮನವನ್ನು ಸೆಳೆಯುತ್ತಾನೆ. ಜೊತೆಗೆ ಅವನು ಒಂದು ಬುಡಕಟ್ಟಿನ ಸಾಂಸ್ಕೃತಿಕ ವೀರ ಹೇಗೋ ಆ ಇಡೀ ಪ್ರದೇಶದಲ್ಲಿನ ದೇವರೇ ಆಗಿದ್ದಾನೆ. ಅಂದರೆ ಅವನು ಜೀವಂತ ಇರುವಾಗಿನ ಘಟನೆಯನ್ನು ಕಾವ್ಯ ನಮಗೆ ವಿವರಿಸುತ್ತದೆ ಎಂಬುದು ಗಣನೀಯವಾಗಿ ಅನುಮಾನವೇ. ಆದರೆ ಮಹಾಕಾವ್ಯದ ಮೂಲಕವೇ ಅವನನ್ನು ಅಭ್ಯಾಸ ಮಾಡುತ್ತಿರುವುದಿರಂದ ಈ ಎಲ್ಲ ಘಟನೆಗಳು ಅವನು ಬದುಕಿದ್ದಾಗಲೇ ನಡೆಯುತ್ತವೆ. ಜನರ ಜೊತೆಗೆ ಅವನೂ ಕೂಡ ತಾನು ದೇವರು ಎಂದು ನಂಬಿದ್ದ ಅಂದರೆ ಜೀವನ ಸುಧಾರಣಾ ಹಂತದಲ್ಲಿ ಅವನು ಬೇರೆಯವರು ತನ್ನ ಮಾತನ್ನು ಕೇಳಲಿ ಎಂಬ ಅಂಶವೂ ಕೆಲಸ ಮಾಡುತ್ತಿರಬಹುದು.

ಮಾದೇಶ್ವರ ಇದ್ದದ್ದು ಮತ್ತು ನೆಲೆಗೊಂಡದ್ದು ಬೆಟ್ಟದಲ್ಲಿ. ಅಂದರೆ ಅಲ್ಲಿನ ನಿವಾಸಿಗಳು ಹೊರ ಜಗತ್ತಿಗೆ ಇನ್ನು ಸರಿಯಾಗಿ ತೆರೆದುಕೊಳ್ಳದಿರುವ ಸಂದರ್ಭ. ಅಂತಹ ಸಂದರ್ಭದಲ್ಲಿ ಅವರಿಗೆ ದೇವರ ಮತ್ತು ಧರ್ಮದ ಬಗ್ಗೆ ವಿವರಿಸುತ್ತಾನೆ. ಮುಖ್ಯವಾಗಿ ಒಕ್ಕಲುಗಳನ್ನು ಪಡೆಯಬೇಕು ಹಿಂಬಾಲಕರನ್ನು ಮಾಡಿಕೊಳ್ಳಬೇಕು ಎಂಬ ನಿಲುವಿನೊಂದಿಗೆ ಅವನು ಕೃಷಿಕರ ಸಮುದಾಯಗಳ ಕಡೆ ಗಮನ ಹರಿಸುತ್ತಾನೆ.

ಕಾವ್ಯದಲ್ಲಿ ಬರುವ ಪಠ್ಯಭಾಗಗಳನ್ನು ಇಟ್ಟುಕೊಂಡು ಅವನು ಕೈಗೊಂಡ ಕ್ರಮಗಳ ಬಗ್ಗೆ ವಿಶ್ಲೇಷಣೆ ನಡೆಸಬಹುದು. ಇಲ್ಲಿ ಮಲೆಮಾದೇಶ್ವರನ ಕಾವ್ಯವನ್ನು ಕುರಿತು ಪ್ರೊ. ಡಿ. ಲಿಂಗಯ್ಯನವರ ಅಭಿಪ್ರಾಯವನ್ನು ತೆಗೆದುಕೊಳ್ಳಬಹುದು. "ಮಲೆಮಾದೇಶ್ವರ ಮುಖ್ಯವಾಗಿ ಕೃಷಿಕರ ವಿದ್ಯಮಾನಗಳನ್ನು ಒಳಗೊಂಡ ಕಾವ್ಯ. ಕೃಷಿಕ ಸಮುದಾಯದಲ್ಲಿ ಧಾರ್ಮಿಕ ಜಾಗೃತಿಯನ್ನು ಜೀವನೋತ್ಸಾಹವನ್ನು ಮೂಡಿಸುವಲ್ಲಿ ಈ ಕಾವ್ಯ ಯಶಸ್ವಿಯಾಗಿದೆ. ಮಾದೇಶ್ವರ ಅಲೆದಾಡಿದ ಸ್ಥಳಗಳು, ಮಾಡಿದ ಪವಾಡಗಳು ಜನಸಾಮಾನ್ಯರಲ್ಲಿ ಸ್ಫೂರ್ತಿದಾಯಕವಾಗಿರುವುದು ಈ ಕಾರಣದಿಂದಲೇ ಮಾದೇಶ್ವರ ಜನಸಾಮಾನ್ಯರ ಕಷ್ಟ ನಿವಾರಿಸಿ ಸುಖ ಸಂತೋಷ ನೀಡಿ ತನ್ನ ಒಕ್ಕಲು ವೃದ್ಧಿಸುವ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವುದು. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸಿ ಲೋಕ ಕಲ್ಯಾಣ ಮಾಡುವುದು. ದೈವ ವಿರೋಧಿಗಳನ್ನು ಬಗ್ಗುಬಡಿದು ದೈವಭಕ್ತರನ್ನಾಗಿ ಪರಿವರ್ತಿಸುವುದು. ಪ್ರಕೃತಿಯ ಪ್ರಾಣಿ ಸಮುದಾಯದಲ್ಲಿ ಆತ್ಮೀಯವಾಗಿ ಒಡನಾಡುವುದು. ಮೂಲನಿವಾಸಿಗಳ

ಸಾಂಸ್ಕೃತಿಕ ವಿಕಾಸಕ್ಕೆ ದಾರಿ ಮಾಡಿಕೊಟ್ಟಿದೆ."[1] ಇಲ್ಲಿ ಮುಖ್ಯವಾಗಿ ಕಾವ್ಯದ ಬಗ್ಗೆ ಕಾವ್ಯನಾಯಕನ ಬಗ್ಗೆ ವಿಶೇಷವಾಗಿ ಅವನ ಧಾರ್ಮಿಕ ಸಾಧನೆಗಳ ಬಗ್ಗೆ ವಿವರಿಸಲಾಗಿದೆ. ಇದೇ ಈ ಅಧ್ಯಾಯಕ್ಕೆ ಹೆಚ್ಚು ಹೊಂದಿಕೊಳ್ಳುವ ಮಾತುಗಳು. ಕೃಷಿಕರ ಸಮುದಾಯದಲ್ಲಿ ಧಾರ್ಮಿಕ ಜಾಗೃತಿಯು ಜೊತೆಗೆ ಜೀವನೋತ್ಸಾಹವನ್ನು ತುಂಬಿದ ಎಂದು ಗ್ರಹಿಸುವುದೆ ವಿಶೇಷವಾಗಿದೆ. ಈ ಮೊದಲು ಅವರಿಗೆ ಜೀವನದ ಬಗ್ಗೆ ಪ್ರೀತಿ ಇದ್ದಿರಬಹುದು. ಆದರೆ ಮಾದೇಶ್ವರ ಬಂದ ನಂತರ ಅವರು ಜೀವನದ ಬಗ್ಗ ಉತ್ಸಾಹವನ್ನು ಹೊಂದಿದ್ದಾರೆ. ಮಾದೇಶ್ವರ ಈ ಬಗೆಯ ಭಿನ್ನ ಜೀವಪರ ಕಾಳಜಿಯನ್ನು ಯಾವತ್ತೂ ಹೊಂದಿದ್ದಾನೆ.

ಮಲೆಮಾದೇಶ್ವರ ಕಾವ್ಯದಲ್ಲಿ ಮಾದೇಶ್ವರ ಶಿಶುಮಗನಾದ ಬೇಡರ ಕನ್ನಯ್ಯನಿಗೆ ಹೀಗೆ ಹೇಳುತ್ತಾನೆ.

"ಕೇಳಲಾ ನನಕಂದ ಬ್ಯಾಡರ ಕನ್ನಯ್ಯ
ಒಬ್ನೆ ಇರೋದ್ಕೆ ಸಿಬ್ರಿ ಅಂತ್ಹೇಳಿ ನಿನ್ನ ಪಡುದುದಾಯ್ತು
ದಿಕ್ ಕಾಣ್ದೆ ಆರಣ್ಯಕೆ ನಾನು ಬಂದಿದದೀನಿ
ಭೂಲೋಕುಕ್ಕೆ ಮಾದೇವ ಅನ್ನುವಂತ ಹೆಸ್ರು
ಪ್ರಸಿದ್ಧಿಯಾಗಬೇಕು
ಕಾಸುನ ಧೂಪ ಹಾಕುಸ್ಕೊಬೇಕು ನನಕಂದ
ಕರವೆತ್ತಿ ಕೈ ಮುಗೀಬೇಕು
ಚಳೀ ತಡೀವಾರಿ ಬಿಸಲ್ ತಡೀಲಾರಿ
ನನ್ಗೆ ಹನ್ನೆರಡಂಕಣದ ಗುಡಿಯಾಗಬೇಕು ಗುಂಡಾರವಾಗ್ಬೇಕು
ಈರತ್ಕಟ್ಟೆಯಾಗಬೇಕು ಮಜ್ಜಣದ ಬಾವಿಯಾಗಬೇಕು
ನನಗೆ ಕಟ್ಟಿಸಿಕೊಡುವಂತ ಭಕ್ತುರಾಗಬೇಕು"[2]

ಇಲ್ಲಿ ಮಾದೇಶ್ವರನಿಗೂ ಸಾಮಾನ್ಯ ಆಸೆಗಳಿವೆ. ಗುಡಿಯಾಗಬೇಕು. ಈರತ್ಕಟ್ಟೆ, ಮಜ್ಜಣದ ಬಾವಿ, ಹನ್ನೆರಡಂಕಣದ ಗುಡಿ ಇತ್ಯಾದಿ ಇಲ್ಲಿ ಮಾದೇಶ್ವರನಿಗೆ ಗುರ್ತಿಸಿಕೊಳ್ಳುವ ಹಂಬಲವಿದೆ. ಒಂದು ಕಡೆ ಬುಡಕಟ್ಟು ಕೃಷಿಕರಿಗೆ ದೈವದ ಮಹತ್ವ ತಿಳಿಸಿದರೆ ಇನ್ನೊಂದು ಕಡೆ ತನ್ನನ್ನು ಪೂಜಿಸಲಿ ತನ್ನನ್ನು ಗುರುತಿಸಲಿ ಎಂಬ ಹಂಬಲ ಹೀಗೆ ಲೌಕಿಕರಾದ ಹಂಬಲ ಎಂದು ಪ್ರಾಯಶಃ ನಾವು ಪರಿಗಣಿಸುವ ಇವುಗಳನ್ನು ಹೊಂದಿರುವ ಜೊತೆಗೆ ಕೃಷಿಕರನ್ನು ಸಾಂಸ್ಕೃತಿಕವಾಗಿಯೂ ಉನ್ನತಮಟ್ಟಕ್ಕೇರಿಸುವ ಚಿಂತನೆಯೂ ಅವನಲ್ಲಿದೆ ಮತ್ತು ಹಾಗೆ ಮಾಡುತ್ತಾನೆ ಕೂಡ.

ತನ್ನ ಆಸೆ ಈಡೇರಿಸಿಕೊಳ್ಳಲು ಮತ್ತು ಜುಂಜೇಗೌಡನಿಗೆ ದೈವದ ಪರಿಚಯ ಮಾಡಿಸಲು ಭಕ್ತಿಯ ಬಗ್ಗೆ ತಿಳಿಸಲು ಅವನ ಬಳಿ ಹೋಗುತ್ತಾನೆ. ಆಲಂಬಾಡಿಯಲ್ಲಿ ಜುಂಜೇಗೌಡ ಏಳುಂಡಿ ದನ ಕುರಿ ಸಾಕೊಂಡು ಹನ್ನೆರಡು ಜೀತದಾಳನ್ನೂ ಇಟ್ಟುಕೊಂಡು ಐಶ್ವರ್ಯದಲ್ಲಿದ್ದಾನೆ.

ಮಾದೇಶ್ವರ ಅವರ ಮನೆಗೆ ಹೋಗಿ ಭಿಕ್ಷೆಯನ್ನು ಸಾರುತ್ತಾನೆ. ಅವನು ಹೋದ ಸಮಯದಲ್ಲಿ ಜುಂಜಪ್ಪನ ಮಡದಿ ಆಲಮ್ಮ ಚಿನ್ನದಂಡೆಯಲ್ಲಿ ಹಾಲನ್ನು ಕರೆಯುತ್ತಿರುತ್ತಾಳೆ. ಆಗ ಹಿಂಡುಗೆ ಮೇಲಾದ ಜಲುಗೊಂಬಿನ ಹಸು ಮಾದೇಶ್ವರನ ಕಡೆ ತಿರುಗಿ ನೋಡುತ್ತದೆ. ಆಗ ಮಾದೇಶ್ವರ ತನ್ನ ಮಹಿಮೆಯನ್ನು ತಿಳಿಸುತ್ತಾನೆ. ಅಂದರೆ ಹಸುವಿಗೆ ಹೇಳುತ್ತಾನೆ.

"ಅಪ್ಪಾ ಹಿಂಡುಗ್ಮೇಲಾದ ಜಲುಗೊಂಬೀನ ಬಿಳೀ ಹಸ್ವೆ
ನಾನು ಏಳ್ಮಲೆ ಕೈಲಾಸದಲ್ಲಿ ನೆಲೆಗೊಂಡಿವ್ನಿ
ನಾನು ನೆಲೆಗೊಂಡಿರುವಂತ ಸ್ಥಳದಲ್ಲಿ ಬಂದು
ನಾನಿರುವಂತ ಮೂಗುತ್ತಕ್ಕೆ
ನಾಲ್ಕು ಕಾಲ್ನು ಪೊತ್ತುರ್‍ಸಬುಟ್ಟು
ನನ್ನ ಅವಸೋಕಕ್ಕೆ ಹಾಲನ್ನು ಹಿಂಡು"[3]

ಅಂದರೆ ತನ್ನ ಕುರುಹನ್ನು ತಾನಿರುವ ಜಾಗವನ್ನು ಮಾದೇಶ್ವರ ಹಸುವಿಗೆ ತಿಳಿಸಿದ್ದಾನೆ. ಹಸು ಕೂಡ ಮಾದೇಶ್ವರನ ಆದೇಶವನ್ನು ಗಮನಿಸಿದೆ. ಮರುಜುಂಜೇಗೌಡ ದನಗಳಟ್ಕೊಂಡು ಮೇಯ್ಸಾಕ್ ಬಂದಿರುವಾಗ, ಜಲುಗೊಂಬಿನ ಬಿಳೀ ಹಸು ಪಕ್ಷಿಯ ಹಾಗೆ ಹಾರಿಕೊಂಡು ಮಾದೇಶ್ವರನಿರುವ ಜಾಗಕ್ಕೆ ಬಂದು ಏಳುಬಾಯಿಯ ಹುತ್ತಕ್ಕೆ ಹಾಲನ್ನು ಕರೆಯುತ್ತದೆ. ಆ ಹುತ್ತವೆಲ್ಲ ತುಂಬಿ ಹರಿಯುವವರೆಗೂ ಅದು ಹಾಲನ್ನು ಹಿಂಡುತಿತ್ತು. ಪ್ರತಿದಿನ ಹೀಗೆ ಮಾಡುತ್ತಿತ್ತು. ಹಟ್ಟಿಗೆ ಹೋದಾಗ ಜುಂಜೇಗೌಡನ ಹೆಂಡತಿ ಆಲಮ್ಮ ಹಾಲನ್ನು ಕರೆದರೆ ಬರೀ ರಕ್ತವನ್ನು ನೀಡುತ್ತಿತ್ತು. ಆಗ ಜುಂಜೇಗೌಡ ನೋಡಿ ಆಶ್ಚರ್ಯಪಟ್ಟು ತನ್ನ ಅಣ್ಣಂದಿರಿಗೂ ತಿಳಿಸುತ್ತಾನೆ. ಇದು ಬರೀ ರಕ್ತವನ್ನೇ ಕರೆಯುತ್ತದೆ. ದನದೊಂದಿಗೆ ಮೇಯಲು ಹೋಗುತ್ತದೆ. ಆದರೆ ಅಲ್ಲಿ ಕಾಣೆಯಾಗುತ್ತೆ. ಸಂಜೆ ಹಸುಗಳ ಜೊತೆಯಲ್ಲಿಯೇ ಮನೆಗೆ ಬರುತ್ತದೆ ಎನ್ನುತ್ತಾನೆ ಜುಂಜಯ್ಯ.

ಮಾದೇಶ್ವರ ಸಹಜವಾಗಿರುವ ಕುಟುಂಬದಲ್ಲಿ ತನ್ನ ಇರುವಿಕೆಯ ಸಣ್ಣ ಕುರುಹನ್ನು ಈ ಮೂಲಕ ನೀಡುತ್ತಿದ್ದಾನೆ. ಆದರೆ ಜುಂಜೇಗೌಡನಿಗೆ ಇದರ ಅರಿವಿಲ್ಲ. ತನ್ನ ಅಣ್ಣಂದಿರೊಂದಿಗೆ ಮಾತನಾಡಿಕೊಂಡು ಜೀತಗಾರರನ್ನು ಕರೆದುಕೊಂಡು ಕೊಡಲಿ ಮಚ್ಚನ್ನು ತೆಗೆದುಕೊಂಡು ಹಸುವನ್ನು ಕಾಯಲು ಹೋಗುತ್ತಾರೆ. ಆಗಲೂ ಕೂಡ ಹಸು ನಿತ್ಯದಂತೆ ಹುತ್ತಕ್ಕೆ ಹೋಗಿ ಹಾಲನ್ನು ಹಿಂಡುತ್ತದೆ. ಆಗ ಅದನ್ನು ಗಮನಿಸುತ್ತಾನೆ. ನಂತರ ಎಲ್ಲರೂ ನಾಳೆ ಹೋಗಬೇಕು ಹೀಗೆ ಹೋದ ಹಸುವನ್ನು ಹೀಗೆ ಬಿಡಬಾರದು. ಅಲ್ಲಿಗೆ ಹೋಗದಂತೆ ಬೇಲಿ ಹಾಕಬೇಕು ಎಂಬುದಾಗಿ ಮಾತನಾಡಿಕೊಳ್ಳುತ್ತಾರೆ. ಮರುದಿನ ಎಲ್ಲರೂ ಬಂದು ಆ ಹುತ್ತವನ್ನು ನೋಡುತ್ತಾರೆ. ಆಗ ಆ ಹುತ್ತದ ಬಳಿಗೆ ಬರಲು ಬೇಲಿಗಳನ್ನು ಕೊಚ್ಚಿಕೊಂಡು ಬರಬೇಕಾದ ಸನ್ನಿವೇಶ. ಹಾಗಾಗಿ ಅಲ್ಲಿ ಬೀಸಿದ ಮಚ್ಚ ಹುತ್ತವನ್ನು ಸವರಿಕೊಂಡ್ಹೋಗಿ ಮಾದೇಶ್ವರನ ಬಲಗಡೆ ಹುಬ್ಬಿನ ಪಾರ್ಶ್ವಕ್ಕೆ ಬೀಳುತ್ತದೆ. ಮಚ್ಚಿನ ಏಟು ಬೀಳುತ್ತಿದ್ದ ಹಾಗೆ ಮಾದೇಶ್ವರ ಒಳಗಿನಿಂದ ಯಾರಪ್ಪ ಹೊಡೆದೋರು ಎನ್ನುತ್ತಾರೆ. ಆಗ ಜುಂಜೇಗೌಡ ಹೆದರಿಕೆಯಿಂದ ಕತ್ತರಿಸುತ್ತಾನೆ. ಅನಿರೀಕ್ಷಿತವಾದ ಈ ಸನ್ನಿವೇಶದಲ್ಲಿ ಒಂದು ಕ್ಷಣ ಹೃದಯವೇ ನಿಂತ ಅನುಭವ. ತನ್ನ ಅಣ್ಣನನ್ನು ಇದೇ ಪೀಡೆಯೋ ಪಿಶಾಚಿಯೋ ಹೀಗೆ ಹೇಳುತ್ತದಲ್ಲ ಎಂದು

ಹೆದರುತ್ತಾನೆ. ಆಗ ಹೆದರುವ ಸನ್ನಿವೇಶದಲ್ಲಿ ಅಲ್ಲಿದ್ದ ಮೆಳೆಗೆಲ್ಲ ಬೆಂಕಿ ಇಡುತ್ತಾರೆ. ನಂತರ ಇವರು ಹೊರಡುತ್ತಾರೆ. ಆಗ ಮಾದೇಶ್ವರ ಆಕಾಶಕ್ಕೂ ಭೂಮಿಗೂ ಬೆಳೆದು ನಿಲ್ಲುತ್ತಾರೆ. ಆಗ ಜುಂಜೇಗೌಡ ನೀನಾರು ಪರದೇಶಿ ಎನ್ನುತ್ತಾನೆ. ಆಗ ಮಾದೇಶ್ವರ

"ನೋಡಪ್ಪ ಜುಂಜೇಗೌಡ
ಮರ್ತೋರ ಮನೆಗೆ ಮನುರೋಗ ಕೊಡ್ತಲ್ಲ
ನೆನೆದೋರ ಮನೆವೊಳ್ಗೆ ಘನವಾಗ್ವಾಲಾಡ ಬಲ
ನಾನು ಮಲೆಮಾದಪ್ಪ ನನಕಂದ
ನನಗೆ ಒಂದಕ್ಣ ಕಲ್‌ಗುಡೀ ಕಟ್ಟೋದುಂಟಾದ್ರೆ
ನಿನುಗಿರೋ ಭಾಗ್ಯವಲ್ಲ ಕಂದ
ನಾನಿನ್ನಿಷ್ಟು ಭಾಗ್ಯ ಕೊಡ್ತಿದ್ದೀನಿ"[3]

ಮಾದೇಶ್ವರ ಮೊದಲ ಬಾರಿಯೇ ಜುಂಜೇಗೌಡನಿಗೆ ತಾನು ನೀಡಬಹುದಾದ ಭಾಗ್ಯದ ಕುರಿತು ಹೇಳುತ್ತಾನೆ. ತನಗೆ ಭಕ್ತನಾಗುವಂತೆ ಹೇಳುತ್ತಾನೆ. ಅವನ ಜೀವನದಲ್ಲಿ ದೈವದ ಒಲವಿಗೆ ಪಾತ್ರವಾಗುವುದರಿಂದ ಆಗುವ ಪ್ರಯೋಜನದ ಬಗ್ಗೆ ಹೇಳುತ್ತಾನೆ. ಮರೆತವರನ್ನು ಜರಿದವರನ್ನು ನರಳಿಸುವುದಾಗಿಯೂ ಹೇಳುತ್ತಾನೆ. ಹೀಗೆ ಒಂದು ಕೃಷಿಕ ಕುಟುಂಬವನ್ನು ದೇವರು ಧರ್ಮ ಇವುಗಳ ಕಡೆಗೆ ತಿರುಗಿಸಲು ಪ್ರಯತ್ನವನ್ನು ಆರಂಭಿಸುತ್ತಾನೆ. ಆದರೆ ಮಾದೇಶ್ವರನ ಅರಿವಿರದ ಜುಂಜೇಗೌಡ ಅವನ ಬಗ್ಗೆ ಹಗುರವಾಗಿ ಮಾತನಾಡುತ್ತಾನೆ. 'ನೀನು ಯಾರೋ ಕಾಡು ಪರದೇಸಿ ನಿನಗೆ ಕಲ್ಲು ಗುಡಿಕಟ್ಟಿಸುವ ತೀಟೆ ನನಗಿಲ್ಲ' ಎನ್ನುತ್ತಾನೆ. ಆದರೆ ಮಾದೇಶ್ವರನನ್ನು ಅವನು ಒಪ್ಪದಿದ್ದರೂ ಇಲ್ಲಿಗೆ ಬಂದು ಬೇಲಿಯನ್ನಾದರೂ ಕಿತ್ತನಲ್ಲ ಎಂದು ಮಾದೇಶ್ವರ ಸಂತೋಷಿಸುತ್ತಾನೆ. ಆಲಂಬಾಡಿಗೆ ಹೋಗಿ ನೋಡಿದರೆ ಹಸುವನ್ನು ಸರಪಳಿಯಲ್ಲಿ ಕಟ್ಟಿದ್ದಾರೆ. ಆದರೆ ಮಾದೇಶ್ವರನ ದೃಷ್ಟಿಗೆ ಅದು ಕಿತ್ತುಹೋಗುತ್ತದೆ. ಮತ್ತೆ ಬಂದು ಹಸು ಹಾಲನ್ನು ಕರೆದುಹೋಗುತ್ತದೆ. ಮತ್ತೆ ಮನೆಗೆ ಹೋದಾಗ ರಕ್ತವನ್ನು ಕರೆಯುತ್ತದೆ. ಆದರೆ ಜುಂಜೇಗೌಡ ಎಷ್ಟು ಹೇಳಿದರೂ ಗುಡಿಕಟ್ಟಿಸಲು ಒಪ್ಪುವುದಿಲ್ಲ. ಆದರೆ ಹುಟ್ಟು ಛಲಗಾರನಾದ ಮಾದೇಶ್ವರ ಅವನಿಂದ ನಾನು ಗುಡಿಕಟ್ಟಿಸಿಕೊಳ್ಳದಿದ್ದರೆ 'ಮಾದೇಶ್ವರ ಅನ್ನುವಂತ ಛಲಯಾಕೆ? ಎಂದು ಇದನ್ನು ಒಂದು ಸವಾಲಾಗಿ ಸ್ವೀಕರಿಸುತ್ತಾನೆ. ಅವನಿಂದ ಗುಡಿ ಕಟ್ಟಿಸಿಯೇ ಕಟ್ಟಿಸುತ್ತೇನೆಂದು ಕೊಳ್ಳುತ್ತಾನೆ. ಅದಕ್ಕಾಗಿ ಅವನು ಹುಲಿಯನ್ನು ಏರಿ ಆಲಂಬಾಡಿಗೆ ಬರುತ್ತಾನೆ.'

ಜುಂಜೇಗೌಡ ಆಲಂಬಾಡಿಯಲ್ಲಿ ಮುನ್ನೂರು ಮೂವತ್ತು ಪಲ್ಲ ಕಳ್ಯವನ್ನು ಬೆಳೆದು ಕಣದಲ್ಲಿ ಹಾಕಿರುತ್ತಾನೆ. ಅಲ್ಲಿ ಬಲಗಾರದ ಕುರ್ಚಿಯಲ್ಲಿ ಕುಳಿತಿರುತ್ತಾನೆ. ಮರು ಜುಂಜಯ್ಯನನ್ನು ಕಾವಲಿರಿಸಿ 'ಯಾರಾದರೂ ಬಂದರೆ ಭಿಕ್ಷೆ ಕೊಡಬೇಡ ಎನ್ನುತ್ತಾನೆ.' ಮುಂದುವರೆದು ನಾಳೆ ಏನು ಮಾಡಬೇಕು ಎನ್ನುವುದನ್ನು ಹೇಳುತ್ತಾನೆ.

"ಈವತ್ತು ಶುಕ್ರವಾರ ನಾಳೀಕೆ ಸನುವಾರ
ನಾಳೆ ಸನುವಾರುದ್ದಿವ್ಸ ರಾಸಿಹೆಚ್ಕೊಕ್ಲು ಮಾಡ್ಬೇಕು
ರಾಶಿ ಹೆಚ್ಕೊಕ್ಲು ಮಾಡ್ಬುಟ್ಟು ರಾಸಿಗಾಡಿಗ್ ತುಂಬ್ಕೊಂಡು
ಆರ್ವಲ್ಲ ಕಳ್ಳೆ ಕಣುದಲ್ ಸುರ್ಕೊಂಡು
ಗುಡ್ಡಯ್ಯ ಗೊರುವಯ್ಯ ಕಾಳ್ಮಕ್ಕಿ ಸನ್ಯಾಸ್ಗೊಳ್ಗೆಲ್ಲ
ಒನೊನ್ದಿಡಿ ಕಳ್ಳೆದಾನ ಕೊಡಬೇಕು
ಅಪ್ಪಾ ಮರುಜುಂಜಯ್ಯ ನಾವೂರ್ಗೋಗಿ
ನೆನಯಕ್ಕಿ ನೆನುಗಳ್ಳೆ ಗೊನೆ ಮುರೀದ್ಬಾಳೆ ಹಣ್ಣು
ಬೆಜ್ಜಲ್ಕೆ ಕೆಂಡ಼ ಕಲ್ಪುರ ಸಾಂರಾಣಿ ಗಂಧದಕಡ್ಡಿ
ಅಳಿಯೋದ್ಕೆ ಕೊಳ್ಗೆ ಎಲ್ಲಾನೂ ತತ್ತಿವಪ್ಪ"[4]

ಇಲ್ಲಿನ ಕೃಷಿಕ ಸಮುದಾಯವು ಕೈಗೊಳ್ಳುವ ಆಚರಣಾತ್ಮಕ ವಿವರಗಳಿವೆ. ಶನಿವಾರ ಕೈಗೊಂಡಿರುವ ಕೃಷಿ ಕಾರ್ಯಗಳನ್ನು ಹೆಚ್ಚಲಿ ಎಂಬ ಆಶಯದೊಂದಿಗೆ ಧಾನ್ಯವನ್ನು ರಾಶಿ ಹಾಕುತ್ತಾರೆ. ಅದನ್ನು ಗಾಡಿಗೆ ತುಂಬಿಕೊಂಡು ಹೋಗುತ್ತಾರೆ. ಇಂತಿಷ್ಟು ಭಾಗವನ್ನು ಗುಡ್ಡ ಗೊರವಯ್ಯಗಳಿಗೆ ಭಿಕ್ಷೆ ನೀಡುತ್ತಾರೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಕೃಷಿಕರು ಜಿಪುಣತನ ಮಾಡದೆ ತಮ್ಮ ಉತ್ಪನ್ನದಲ್ಲಿ ಸ್ವಲ್ಪ ಪ್ರಮಾಣದಲ್ಲಿ ಇತರರಿಗೂ ಹಂಚುತ್ತಾರೆ ಎಂಬುದು. ರಾಶಿಯನ್ನು ಪೂಜೆಮಾಡಲು ಬಳಸುವ ಪೂಜಾ ಸಾಮಗ್ರಿಗಳ ವಿವರ ದೊರೆಯುತ್ತದೆ. ಕೆಲವು ನಿರ್ದಿಷ್ಟ ವಸ್ತುಗಳನ್ನು ಬಳಸಿ ರಾಶಿಗೆ ಪೂಜೆ ಮಾಡುತ್ತಾರೆ ಎಂಬುದು. ಇಲ್ಲಿ ಜೀವನ ವಿಧಾನದಲ್ಲಿ ಕೆಲವು ಮುಖ್ಯವಾದ ವಿವರಗಳನ್ನು ಕಾವ್ಯ ಒಳಗೊಳ್ಳುತ್ತದೆ. ನೆನೆಯಕ್ಕಿ ನೆನುಗಳ್ಳೆ ಗೊನಿ ಮುರೀದ್ಬಾಳೆ ಹಣ್ಣು ಇವುಗಳ ವಿವರ ಬರುತ್ತದೆ. ಈಗಲೂ ಕೃಷಿ ಕುಟುಂಬಗಳಲ್ಲಿ ಈ ವಸ್ತುಗಳೇ ಪೂಜೆಗೆ ಬಳಸುವುದನ್ನು ಕಾಣುತ್ತೇವೆ.

ಜುಂಜೇಗೌಡ ಮರು ಜುಂಜೇಗೌಡನಿಗೆ ಎಚ್ಚರದಿಂದಿರುವಂತೆ ಹೇಳಿ ಮನೆಗೆ ಹೋಗುತ್ತಾನೆ. ಆಗ ಮಾದೇಶ್ವರ ತನ್ನ ಮಾತನ್ನು ಕೇಳಲಿಲ್ಲ ಎಂದು ಇವನ ಧುನಿಯಾವನ್ನು ಧೂಳೀಪಟ ಮಾಡದೇ ಹೋದರೆ ನನ್ಗೆ ಮಲೆಮಾದೇಶ್ವರ ಅನ್ನುವಂತ ಛಲಾಯಾಕೆ? ಎಂದು ಭಿಕ್ಷೆ ಕೇಳಲು ಕಣಕ್ಕೆ ಬರುತ್ತಾನೆ. ಜುಂಜೇಗೌಡ ಕಣವನ್ನು ಕಾದುಕುಳಿತಿದ್ದ ಆಗ ಮಾದೇಶ್ವರ ಬಂದು ಭಿಕ್ಷೆಯನ್ನು ಸಾರುತ್ತಾನೆ. ಆಗ ಜುಂಜೇಗೌಡ 'ಯಾರಯ್ಯ ನೀನು ಇನ್ನೂ ರಾಶಿ ಪೂಜೆ ಮಾಡಿಲ್ಲ ಎಂದು ಶುಕ್ರವಾರ ಇವತ್ತು ಭಿಕ್ಷೆ ಕೊಡೋದಿಲ್ಲ ಎಂದು ಹೇಳುತ್ತಾನೆ. ಜುಂಜೇಗೌಡನಿಗೆ ಸಂಪತ್ತು ಅತಿಯಾಗಿದೆ ಹಾಗಾಗಿ ಅವನಿಗೆ ದಾನ ಅಂದರೆ ಗ್ಯಾನವಿಲ್ಲ. ಭಿಕ್ಷೆ ಎಂದರೆ ಲಕ್ಷ್ಯವಿಲ್ಲ. ಹಾಗಾಗಿ ಅವನು ಮಾದೇಶ್ವರನನ್ನು ಬಯ್ದು ಕಳುಹಿಸುತ್ತಾನೆ. ಆದರೆ ಮಾದೇಶ್ವರ ಹೋಗುವುದಿಲ್ಲ. ನಾನು ನಿನಗೆ ಇನ್ನೂ ಹೆಚ್ಚು ಸಂಪತ್ತು ನೀಡುವುದಾಗಿ ಹೇಳುತ್ತಾನೆ. ಆದರೆ ಜುಂಜೇಗೌಡ ತನ್ನ ಅಣ್ಣನ ಮಾತನ್ನು ಮೀರುವುದಿಲ್ಲ' ಎನ್ನುತ್ತಾನೆ.

"ಜಂಗೂಮಯ್ಯ ಒಂದಿಡಿಯಲ್ಲ ಒಂದ್ಕಾಳ್ನು ಕೊಡಕಿಲ್ಲ
ನಮ್ಮಣ್ಣಯ್ಯನವರ ಮಾತ ನಾ ಮೀರಾಕಿಲ್ಲ
ಮೀರಿ ನಿನ್ಗೆ ನಾ ಭಿಕ್ಷೆ ಕೊಡಕಿಲ್ಲ
ಮೂಲ್ ಮೂಲೆಗೆ ಮುದ್ರೆ ಹೊಡುದ್ಬುಟ್ಟು ಹೋಗವ್ರೆ
ಕಡುದೋಗೋ ಕಾಡ ಪರದೇಸಿ"[5]

ಇಲ್ಲಿ ರಾಶಿಗೆ ಹಾಕುವ ಗುರುತು ಅಂದರೆ ಮುದ್ರೆ ಮುಖ್ಯವಾಗುತ್ತದೆ. ಕೃಷಿಕರು ತಮ್ಮ ಧಾನ್ಯವನ್ನು ಯಾರಾದರೂ ತೆಗೆದುಕೊಂಡಿದ್ದಾರೆಯೇ ಎಂದು ಕಂಡುಕೊಳ್ಳಲು ಈ ಮುದ್ರೆಯನ್ನು ರಾಶಿಗೆ ಹಾಕುತ್ತಿದ್ದರು. ಇದು ಒಂದು ಬಗೆಯ ರಕ್ಷಣೆಯ ವಿಧಾನವೂ ಹೌದು. ಪತ್ತೆದಾರಿಯ ವಿಧಾನವೂ ಹೌದು. ಕೃಷಿ ಸಂಸ್ಕೃತಿಯ ಒಂದು ಮುಖದ ಪರಿಚಯ ಇಲ್ಲಿದೆ. ಬೆಳೆದ ಬೆಳೆಯನ್ನು ಈ ದಿನವೇ ಒಕ್ಕಣೆ ಮಾಡಬೇಕು. ಇಂತಹ ದಿನವೇ ರಾಶಿ ಹಾಕಬೇಕು. ಇಂತಹ ದಿನವೇ ಒಕ್ಕಣೆ ಮಾಡಬೇಕು ಇಂತಹ ದಿನವೇ ರಾಶಿಯಾಕಬೇಕು, ಇಂತಹ ದಿನವೇ ಪೂಜೆ ಮಾಡಿ ಮನೆಗೆ ಒಯ್ಯಬೇಕು. ಇತ್ಯಾದಿ ವೈಶಿಷ್ಟ್ಯಗಳನ್ನು ಕೃಷಿ ನಂಬಿಕೆಗಳನ್ನು ಕೃಷಿಕರು ಹೊಂದಿದ್ದಾರೆ.

ಮುಂದುವರೆದು ಮತ್ತೆ ಮಾದೇಶ್ವರ ಭಿಕ್ಷೆಯನ್ನು ಕೇಳುತ್ತಾನೆ. ಆದರೆ ಜುಂಜೇಗೌಡ 'ನಿನಗೆ ನನ್ನ ರಾಶಿಯ ನೋಡಿ ಕಣ್ಣಿಗೆ ಕಾರಹೊಡೆದಂಗೆ ಹಾಗಿದೆ. ನೀನೇನು ಹೊಲ ಉತ್ತಿದ್ದೆಯ, ಕಂದಾಯ ಕಟ್ಟಿದ್ಯ' ಎಂದು ಕೇಳುತ್ತಾನೆ. ನೀನು ಇನ್ನು ನಿಂತರೆ ನಿನಗೆ ಮರಕಡ್ಡಿಯಲ್ಲಿ ಹೊಡೆಯುವುದಾಗಿ ಬೆದರಿಸುತ್ತಾನೆ. ಆದರೆ ಮಾದೇಶ್ವರ ನಿನ್ನ ಹೊಲದಲ್ಲಿ ಕಣದಲ್ಲಿ ನಾನೇನೂ ಕದ್ದಿಲ್ಲ ಆದ್ದರಿಂದ ಹೊಡೆಯುವ ಅಗತ್ಯವಿಲ್ಲ ಎನ್ನುತ್ತಾನೆ. ಮಾದೇಶ್ವರ ಚರ್ಚೆಗೆ ನಿಲ್ಲುತ್ತಾನೆ ಆದರೆ ಜುಂಜೇಗೌಡ ಮರಕಡ್ಡಿಯಿಂದ ಹೊಡೆಯಲು ಬರುತ್ತಾನೆ. ಆಗ ಮುಂದೆ ಮಾದೇಶ್ವರ ಓಡುತ್ತಾನೆ ಹಿಂದೆ ಜುಂಜೇಗೌಡ ಹೊಡೆಯಲು ಹೋಗುತ್ತಾನೆ. ಆಗ ಮಾದೇಶ್ವರ ದೇವರ ಬಗ್ಗೆ ಈ ಅವಿವೇಕಿಗೆ ತಿಳಿದೇ ಇಲ್ಲವಲ್ಲ ಅವನಿಗೆ ನನ್ನ ಮಾಯವನ್ನು ತೋರಿಸಬೇಕೆಂದು ಮಂಕು ಬೂದಿಯನ್ನು ಅವನ ಮೇಲೆ ಎರಚುತ್ತಾನೆ. ಜುಂಜೇಗೌಡ ಹೊಡೆಯಲು ಎತ್ತಿದ ಕೈಹಾಗೆ ಇದೆ. ಬಾಯಿ ನಿಂತುಹೋಗಿದೆ. ಬಿಟ್ಟ ಕಣ್ಣು ಬಿಟ್ಟಂತೆ ಇದೆ. ಮರವನ್ನು ನೆಟ್ಟರೆ ಹೇಗಿರುತ್ತದೊ ಹಾಗೆಯೇ ಇವನೂ ನಿಂತಿದ್ದಾನೆ. ಆಗ ಮಾದೇಶ್ವರನು 'ನನಗೀಗ ಮರ್ಕಡ್ಡಿ ತಗೊಂಡು ಹೊಡೆಯಪ್ಪ' ಎನ್ನುತ್ತಾರೆ. ಜುಂಜೇಗೌಡನಿಗೆ ಮಾತನಾಡಲು ಬಾಯಿಲ್ಲ, ಹೊಡೆಯಲು ಆಗುವುದಿಲ್ಲ. ಅಂತಹ ಸಂದರ್ಭದಲ್ಲಿ ಭಿಕ್ಷೆಯನ್ನು ಕೊಡಲಿಲ್ಲ ಎಂಬ ಕೋಪದಿಂದ ಮಾದೇಶ್ವರ ಮುನ್ನೂರು ಮುವತ್ತು ಪಲ್ಲ ಕಳ್ಳೆಯನ್ನು ಮೂರು ಹಿಡಿ ಮಾಡಿಕೊಂಡು ಜೋಳಿಗೆಗೆ ತುಂಬಿಕೊಂಡು ಹೋಗುತ್ತಾನೆ. ಒಂದು ಬಂಡೆಯ ಮೇಲೆ ನಿಂತು ಮಾದೇಶ್ವರ ಜುಂಜೇಗೌಡನಿಗೆ ಜ್ಞಾನವನ್ನು ಕೊಡುತ್ತಾನೆ. ಮಾದೇಶ್ವರ ಬಂಡೇ ಮೇಲೆ ನಗುತ್ತಾ ನಿಂತಿದ್ದಾನೆ ಆದರೆ ಜುಂಜೇಗೌಡನಿಗೆ ಆಶ್ಚರ್ಯ ಹಾಗಾಗಿ ಕಣಕ್ಕೆ ಬಂದು ನೋಡಿದರೆ ಒಂದೂ ಕಳ್ಳೆಯಿಲ್ಲ, ಹೀಗಾದ ಮೇಲೆ ನಾನು ಇಲ್ಲಿದ್ದು ಪ್ರಯೋಜನವೇನು ಎಂದು ತಿಳಿದು ಈ ವಿಷಯವನ್ನು ಅಣ್ಣಂದಿರಿಗೆ ತಿಳಿಸಲು ಹೋಗುತ್ತಾನೆ. ಜುಂಜೇಗೌಡ ಎಲ್ಲ ವಿಷಯವನ್ನು ಹೇಳುತ್ತಾನೆ. ಆಗ ಅಣ್ಣಂದಿರು 'ಇವನನ್ನು ಸುಮ್ಮನೆ ಬಿಟ್ಟರೆ ನಮ್ಮ ಊರು ಕೇರಿ

ಉಲಿಯುವುದಿಲ್ಲ ಆದ್ದರಿಂದ ಊರ ಮುಂದಿನ ಚಾವಡಿಗೆ ಕರೆತಂದು ಕೊಲೆ ಕಷ್ಟವನ್ನು ಕೊಡಬೇಕು ಎಂದು ಮಾತನಾಡಿಕೊಳ್ಳುತ್ತಾರೆ.' ಮಾದೇಶ್ವರನನ್ನು ಕಳ್ಳ ಎಂದು ತಿಳಿಯುತ್ತಾರೆ.

ಮಾದೇಶ್ವರ ತಾನು ತಂದ ಕಳ್ಳೆಯನ್ನು ಒಂದು ಕಡೆ ಇಟ್ಟು ಅದರ ರಕ್ಷಣೆಗೆ ಒಂದು ಹುಲಿಯನ್ನು ನೇಮಿಸುತ್ತಾನೆ. ಮತ್ತೊಂದನ್ನು ಅವರು ಬರುತ್ತಿರುವ ಹಾದಿಗೆ ಅಡ್ಡವಾಗಿರಿಸುತ್ತಾನೆ. ಅವರನ್ನು ಒಂದು ಹೆಜ್ಜೆ ಮುಂದೆ ಬಿಡದಿರುವಂತೆ ಹೇಳುತ್ತಾನೆ. ಇತ್ತಕಡೆ ಅಣ್ಣತಮ್ಮಂದಿರು ಮಾದೇಶ್ವರ ನನ್ನ ಹಿಡಿಯಲು ಹೊರಡುತ್ತಾರೆ. ಆಗ ಒಂದು ಗರುಡಪಕ್ಷಿ ಬಂದು ಅವರೆಲ್ಲರ ತಲೆಗೆ ಬಡಿದುಕೊಂಡು ಹೋಗುತ್ತದೆ. ಎಲ್ಲರ ತಲೆಯ ಮೇಲೂ ಹಲ್ಲಿಗಳು ಬೀಳುತ್ತದೆ. ಆಗ ಅಪಶಕುನ ಎಂದು ಹೇಳುತ್ತಾನೆ ಒಬ್ಬ ಗೌಡ. ಆದರೆ ಸಹಜ ಅದನ್ನು ಗಂಭೀರವಾಗಿ ಪರಿಗಣಿಸಬಾರದೆಂದು ಮತ್ತೊಬ್ಬ ಹೇಳಿ ಮುಂದುವರೆಸುತ್ತಾನೆ. ಮುಂದೆ ಕಾಳಿಂಗ ಸರ್ಪ ಅವರಿಗೆ ದಾರಿಕೊಡದಂತೆ ಏಕವಾಗಿ ಮಲಗಿರುತ್ತದೆ. ಅದನ್ನೂ ಮೀರಿ ಅವರು ಮುಂದುವರೆಯುತ್ತಾರೆ. ಆಗ ಮಾದೇಶ್ವರ ದೇವರ ಮಹಿಮೆಯನ್ನು ತಿಳಿಸಬೇಕು ಇವರಿಗೆ ನನ್ನ ಶಕ್ತಿ ತೋರಿಸಬೇಕು ಎಂದು ಎಲ್ಲ ಹುಲಿಗಳನ್ನು ಕರೆಯುತ್ತಾನೆ. ಎಲ್ಲ ಹುಲಿಗಳೂ ಬಂದು ಅವನ ಸುತ್ತ ನಿಲ್ಲುತ್ತವೆ. ಆಗ ಅಣ್ಣ ತಮ್ಮಂದಿರೆಲ್ಲರೂ ನನ್ನನ್ನು ಹಿಡಿಯಲು ಕುದುರೆ ಮೇಲೆ ಬರುತ್ತಿದ್ದಾರೆ ನೀವು ಹೋಗಿ ಒಬ್ಬರು ಮತ್ತೊಬ್ಬರಿಗೆ ಸಿಗದಂತೆ ಓಡುವಂತೆ ಮಾಡಿ ಎನ್ನುತ್ತಾನೆ. ಹಾಗೆಯೆ ಹುಲಿಗಳು ಬಂದು ಹೆದರಿಸಿದ್ದರಿಂದ ಕುದುರೆಗಳ ದಿಕ್ಕಾಪಾಲಾಗಿ ಓಡಿಹೋಗುತ್ತವೆ. ಜುಂಜೇಗೌಡ ಒಂದು ಹಳ್ಳದೊಳಗೆ ಜೀವ ಉಳಿಸಿಕೊಳ್ಳಲು ಮಲಗಿಕೊಳ್ಳುತ್ತಾನೆ. ಜೀವಭಯದಿಂದ ನಡುಗುತ್ತಾ ಮನೆದೇವರು ಕುಲದೇವರು ಯಾವುದೂ ಇಲ್ಲದಂತೆ ಆದವಲ್ಲ ಎಂದುಕೊಳ್ಳುತ್ತಾನೆ. ಆಗ ಮಾದೇಶ್ವರ ಆ ಮಾರ್ಗವಾಗಿ ಬರುತ್ತಾನೆ. ವಿಷಯವನ್ನು ತಿಳಿದಾಗ ಆ ಜಂಗಮ ನಿನಗೆ ಸಿಕ್ಕಿದ್ದನ್ನು ಎಂದು ಮಾದೇಶ್ವರ ಕೇಳುತ್ತಾನೆ. ಜಂಗಮ ಸಿಕ್ಕಲಿಲ್ಲ ಎಂದು ಜುಂಜೇಗೌಡ ಹೇಳುತ್ತಾನೆ.

ಇತ್ತಕಡೆ ಜುಂಜೇಗೌಡನ ಏಳುಮಂದಿ ಗಂಡುಮಕ್ಕಳು ಶಾಲೆಗೆ ಪಾಠಕಲಿಯಲು ಹೋಗಿರುತ್ತಾರೆ. ಮಾದೇಶ್ವರ ಅವರನ್ನು ಗೋಗಲ್ಲು ಮಾಡಿದ್ದಾನೆ. ಜುಂಜೇಗೌಡ ಮನೆಗೆ ಬಂದಾಗ ಆಲಮ್ಮ ಮಕ್ಕಳು ಇನ್ನೂ ಬಂದಿಲ್ಲ ಎಂದು ದುಃಖಿಸುತ್ತಾಳೆ. ಆಗ ಜುಂಜೇಗೌಡ ನಮಗೆ ಒದಗಿರುವ ಸ್ಥಿತಿಯ ಬಗ್ಗೆ ಚಿಂತಿಸುತ್ತಾ ಶಾಸ್ತ್ರವನ್ನು ಕೇಳುವ ಯೋಚನೆಯನ್ನು ಮಾಡುತ್ತಾನೆ. ಆಗ ಮಾದೇಶ್ವರ ಕೊರವಂಜಿ ವೇಷದಲ್ಲಿ ಅಲ್ಲಿಗೆ ಬರುತ್ತಾನೆ. ಆಗ ಆಲಮ್ಮ ಕೊರವಂಜಿಯನ್ನೂ ಮನೆಯೊಳಗೆ ಕರೆದು ಕೂರಿಸುತ್ತಾಳೆ. ಆಗ ಕೊರವಂಜಿ ರೂಪದಲ್ಲಿದ್ದ ಮಾದೇಶ್ವರ ಮನೆಯೊಳಗೆ ಹೊಗುತ್ತಿದ್ದಂತೆ ಮನೆ ಎಲ್ಲ ಬೆಳಕಾಗುತ್ತದೆ. ನಂತರ ಆಲಮ್ಮ ಕೊರವಂಜಿಗೆ 'ಆಸೆಮಡ್ಗಿ ಹತ್ತೆಲೆ ಐದು ಅಡಿಕೆ ಹಣ' ತಂದಿಡುತ್ತಾಳೆ. ಆಗ ಕೊರವಂಜಿ ಎಲ್ಲ ವಿಷಯವನ್ನು ಹೇಳುತ್ತಾಳೆ. ಜುಂಜೇಗೌಡ ಸಂಯೋಗಬೇಕಾದರೆ ನಿವಾರಣೆಯಾಗಬೇಕಾದರೆ ಏನು ಮಾಡಬೇಕು ಎಂದು ಕೇಳುತ್ತಾನೆ. ಕೊರವಂಜಿ ಅವನ ಮನೆದೇವರುಗಳು ಈ ಸಂದರ್ಭದಲ್ಲಿ ಏನು ಮಾಡುತ್ತಾರೆ ಎಂದೂ ಅವನ ಮನೆ ದೇವರ ನಿರ್ಲಕ್ಷ್ಯವನ್ನು ನಿಮಗೆ ತೊಂದರೆ ಕೊಟ್ಟಿರುವ ದೇವರು ಶಕ್ತನೆಂದೂ ಹೇಳುತ್ತಾಳೆ. ಆಗ ಜುಂಜೇಗೌಡ ಇದಕ್ಕೆ ಪರಿಹಾರಬೇಕು ಎಂದು ಕೇಳುತ್ತಾನೆ. ಆಗ ಕೊರವಂಜಿ ಹೀಗೆ ಹೇಳುತ್ತಾಳೆ.

"ಜುಂಜೇಗೌಡ ಕಳ್ಳೆ ಕಣುದಲ್ಲಿ ಬಂದು
ಭಿಕ್ಷಾ ಕೇಳುದನಲ್ಲ ಆ ಜಂಗಮ
ಅವ್ನು ಆಡವೀ ಅರಣ್ಯ ಗಿಡವೀ ಗೆಂಡಾರ
ಕೊಂಗನಾಡು ಕುಂಪುಣ ಸೀಮೆ
ಬಾಡಬಾಕುನಗುತ್ತಿ ಇಸಂಪ್ಪಾಜಿಒತ್ತೆ
ನುಗ್ನಾರದ ಏಳ್ಮಲೆ ಕೈಲಾಸ್ದಲ್ಲಿ
ಏಳ್ಬಾಯ್ ಹೊನ್ನುತ್ತದಲ್ಲಿ ಇದ್ದಾನೆ.
ಆ ಜಂಗೊಮ ನೆಸ್ರು ಮಲೆಮಾದೇಶ್ವರ
ನೋಡಪ್ಪ ನೀನು ಅವನಿಗೆ ಕುಲ್ಗುಡಿ ಕಟ್ಸಿದ್ದೆ ಆದ್ರೆ
ನಿನ್ನ ಕಷ್ಟವೆಲ್ಲ ಪರಿಹಾರ ಮಾಡ್ತಾನೆ
ಆ ಮಾದೇವನಿಗೆ ಒಕ್ಕಲಾದ್ರೆ ಗುಡಿ ಕಟ್ಟಿಸಿದ್ರೆ
ಆಲಂಬಾಡಿಯನ್ನು ಉದ್ಧಾರ ಮಾಡ್ತನೆ
ಇಲ್ಲೆ ಹೋದ್ರೆ ಅಡ್ಕೆ ಹಾಕ್ಕೊಂಡು ಎಲೆ
ಮಡ್ಗೋದ್ರಲ್ಲಿ ನಿನ್ನ ಆಲಂಬಾಡಿಯನ್ನು ಹಾಳ್ಮಾಡ್ತನೆ"[6]

ಮಾದೇಶ್ವರ ಜುಂಜೇಗೌಡನಲ್ಲಿ ದೈವದ ಬಗೆಗೆ ನಂಬಿಕೆಯನ್ನು ಉಂಟುಮಾಡಲು ಹಾಕದ ವೇಷವಿಲ್ಲ. ಆಡದ ಮಾತಿಲ್ಲ. ಮೇಲೆ ವಿವರಿಸುವಂತೆ ಅಡವಿಯಲ್ಲಿ ಅವನು ಏಳುಬಾಯಿಯ ಹುತ್ತದಲ್ಲಿ ಇದ್ದಾನೆ. ಆ ಜಂಗಮನಿಗೆ ಕಲ್ಲಿನ ಗುಡಿಯನ್ನು ಕಟ್ಟಿಸಬೇಕು. ಇಲ್ಲದಿದ್ದರೆ ನಿನ್ನ ಮನೆ ಊರು ಹಟ್ಟಿ ನಾಶವಾಗುತ್ತದೆ. ಅವನು ನಾಶಮಾಡುತ್ತಾನೆ ಎಂದು ಕೊರವಂಜಿ ಹೇಳುತ್ತಾಳೆ. ಅವನ ಒಕ್ಕಲಾದರೆ ಅವನನ್ನು ನಂಬಿದರೆ ಅವನು ನಿಮ್ಮ ಕಷ್ಟವನ್ನು ಪರಿಹಾರ ಮಾಡುತ್ತಾನೆ. ಇಲ್ಲವಾದರೆ ಅಡಿಕೆ ಹಾಕಿ ಎಲೆಮಡಿಸುವುದರಲ್ಲಿ ನಿಮ್ಮ ಮನೆಯನ್ನು ನಾಶಗೊಳಿಸುತ್ತಾನೆ ಎಂದು ಹೇಳುತ್ತಾಳೆ. ಅಂದರೆ ಅಷ್ಟು ಕ್ಷಿಪ್ರಗತಿಯಲ್ಲಿ ನಾಶಮಾಡುತ್ತಾನೆ ಎನ್ನುತ್ತಾಳೆ. ಆದರೆ ಜುಂಜೇಗೌಡ ನಮ್ಮ ಸಂಸಾರ ಹಾಳಾದರೂ ಚಿಂತೆ ಇಲ್ಲ ಬಟ್ಟೆ ಇಲ್ಲದಂತಾದರೂ ಊಟ ಇಲ್ಲದಂತಾದರೂ ಸರಿ ನಾನು ಅವನಿಗೆ ಒಕ್ಕಲಾಗುವುದಿಲ್ಲ ಎಂದು ತಿಳಿಸುತ್ತಾನೆ. ಹಸು ಹೋಗಿ ಹಾಲು ಕರೆಯುವ ಹುತ್ತದ ಸ್ಥಳಕ್ಕೂ ಹೋಗಬೇಕು ಎಂದು ತೀರ್ಮಾನಿಸುತ್ತಾನೆ. ಆಗ ಜೀತಗಾರರ ಜೊತೆ ಅವನು ಹೋಗುತ್ತಾನೆ. ಒಂದು ಸಲ ಹಸು ಜಿಗಿಯಿತಂತೆ ಹಸುವನ್ನು ಹಿಡಿದುಕೊಳ್ಳಲು ಯಾರ ಕೈಯ್ಯಲ್ಲೂ ಆಗುವುದಿಲ್ಲ. ಮಾದೇಶ್ವರನು ಇರುವ ಸ್ಥಳಕ್ಕೆ ಬಂದು ಹಸು ಹಾಲನ್ನು ಕರೆಯುತ್ತಿದೆ ಜುಂಜಪ್ಪ ನೋಡುತ್ತಿದ್ದಾನೆ. ಆಗ ಅದನ್ನು ಮನೆಯಲ್ಲಿ ಮಡುಗಬಾರದು ಕಟುಕರಿಗೆ ಕೊಡಬೇಕು ಎಂದು ತೀರ್ಮಾನಿಸಿ ಅದನ್ನು ಹಿಡಿಯಲು ಹೋದರೆ ಅದು ಯಾರ ಕೈಗೂ ಸಿಗುವುದಿಲ್ಲ. ಆಗ ಅವನ ಮನೆಯಲ್ಲಿರುವ ಎಲ್ಲ ದನಗಳಿಗೂ ನಾಗೇರು ಬಂದು ಸತ್ತು ಹೋದವು. ಇದ್ದ ರಾಗಿ ಎಲ್ಲ ಮುಗ್ಗಲು ಆದವು. ಜ್ವಾಳದ ಗುಳೀನಲ್ಲ ಮರಳಾದವು. ಆಗ ಜುಂಜೇಗೌಡ ಮಲಗಿ ಯೋಚನೆ ಮಾಡುತ್ತಿದ್ದರೆ ಆಲಮ್ಮ ಈಗಲಾದರೂ ದೇವರಿಗೆ ಒಕ್ಕಲಾಗಿರಿ ಎಂದಳು. ಆಗ ಜುಂಜೇಗೌಡ ಅವಳನ್ನು ಬಯ್ಯುತ್ತಾನೆ. ಪೆಟ್ಟಿಗೆಯಲ್ಲಿ ಇದ್ದ ಹಣವೆಲ್ಲ ಇದ್ದಿಲಾಗಿತ್ತು. ಆಗ ಆಲಮ್ಮ

ಬೇಲಿ ಮೇಲಿನ ಸೊಪ್ಪನ್ನು ತಂದು ಬೇಯಿಸುತ್ತಾಳೆ. ಅದೇ ಸಂದರ್ಭಕ್ಕೆ ನೆಂಟರು ಬರುತ್ತಾರೆ. ಆದರ ಅವರ ಕಣ್ಣಿಗೆ ಹಾಲು ಅನ್ನ ಹಾಕುವಂತೆ ಮಾಡಿದ್ದಾನೆ. ನೆಂಟರು ಹೋಗುತ್ತಾರೆ. ಜುಂಜೇಗೌಡ ಇವರೂ ನಮ್ಮ ಕಷ್ಟ ಕೇಳಲಿಲ್ಲವಲ್ಲ ಎಂದು ಗೋಳಾಡುತ್ತಾನೆ.

ಒಂದು ಮಧ್ಯರಾತ್ರಿಯಲ್ಲಿ ಮಾದೇಶ್ವರ ನಿಜರೂಪವಾಗಿ ಕಾಣಿಸಿಕೊಂಡು ಜುಂಜೇಗೌಡನಿಗ ಹೇಳುತ್ತಾನೆ. ಈಗಲಾದರೂ ನನ್ನ ಒಕ್ಕಲಾದರೆ ನಿನ್ನ ಬದುಕನ್ನು ಹಿಂದಕ್ಕೆ ಕೊಡುತ್ತೇನೆ ಎಂದಾಗ ಜುಂಜೇಗೌಡ ಒಪ್ಪಿಕೊಳ್ಳುತ್ತಾನೆ. ಏಳುಕೊಪ್ಪರಿಗೆ ಹಣ ಕೊಡುತ್ತೇನೆ ಎನ್ನುತ್ತಾನೆ. ನಂತರ ಮಾದೇಶ್ವರ ತನ್ನ ಗುಡಿಯನ್ನು ಇಂತಿಂತಹ ವಿಧಾನದಲ್ಲಿ ಕಟ್ಟಬೇಕು ಆದಕ್ಕಾಗಿ ನೀನು ಯೋಚಿಸಬೇಡ ನಾನು ಹಣವನ್ನು ಕೊಡುತ್ತೇನೆ ಎನ್ನುತ್ತಾನೆ.

"ನಿನ್ಮನೆಯಿಂದ ಧೂಪುಕ್ಕೆ ಒಂದ್ದುಡ್ನೂ ತರಬೇಡಪ್ಪ
ನಿನ್ಹಸ ಹಾಲ್ ಕರೀತಿತ್ತಲ್ಲ
ಕತ್ರುಸಿ ಎಲ್ಲಾನು ಒಟ್ಗೆ ಕಕ್ಲು ತಂದಿದ್ರ್ಯಲ್ಲ ಅಲ್ಲಿ
ನೀವಣ್ ತಮ್ಮೀರ್ ಆರ್‍ಜನೂವೆ ಬಂದು
ಗುದ್ಲಿಪಿಕಾಸಿಯನ್ನು ತಕ್ಕೊಂಡು
ತುಂಬುದ ಸೋಮಾರ ಜಿವ್ನ ಸೂರ್‍ಯರುದಯವಾಗೋಗ
ನಿಮ್ಮನೆಯಿಂದ ಹಣ್ಕಾಯಿ ಸಾಂರಾಣಿ ತಕ್ಕಂಡು
'ಮಾದೇವ' ಅಂತ್ಹೇಳಿ ಗಂಧದ ಕಟ್ಟಿ ಹಸ್ಸಿ
ಧೂಪವನ್ನು ಬೆಳಗಿ ಪೂಜೆಮಾಡ್ಬುಟ್ಟು
ಗುದ್ಲಿಯ ನೀವು ಭೂಮ್ಗಿಡಿ
ಆರುಕೊಪ್ಪುರ್‍ಕೆ ದ್ರವಿಯನ್ನು ನಿಮ್ಮ ಗುದ್ಲಿ ಬಾಯ್ಗೆ
ಸಿಕ್ಕುಸ್ತೀನಿ"[7]

ಹೀಗೆ ಮಾದೇಶ್ವರ ಜುಂಜೇಗೌಡನು ದೇವರನ್ನು ನಂಬುವಂತೆ ಮಾಡುತ್ತಾನೆ. ಹಾಗೆ ಒಪ್ಪಿಕೊಂಡು ಸುಮ್ಮನಿರಲು ಬಿಡದೆ ಸಕ್ರಿಯವಾಗಿ ದೇವರ ಕಾರ್ಯದಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತಾನೆ. ಮಾದೇಶ್ವರ ನೀಡುವ ಹೇಳಿಕೆಯನ್ನು ನೋಡಿದಾಗ ಇನ್ನೊಂದು ಅಂಶ ಗಮನಕ್ಕೆ ಬರುತ್ತದೆ. ಮಾದೇಶ್ವರ ಮುಖ್ಯವಾದ ಕೆಲಸವನ್ನು ಆರಂಭಿಸಬೇಕಾದರೆ ಸೋಮವಾರವನ್ನು ಮುಖ್ಯ ದಿನವಾಗಿಟ್ಟುಕೊಂಡಿದ್ದಾನೆ. ದೇವಾಲಯ ಕಟ್ಟಲು ಬೇಕಾಗುವ ದ್ರವ್ಯವನ್ನು ನಿನಗೆ ಸಿಗುವಂತೆ ಮಾಡುತ್ತೇನೆ ಎಂದು ನೀನು ಹುತ್ತದ ಬಳಿ ಸಾಂರಾಣಿ ಮತ್ತು ಹಣ್ಣುಕಾಯಿ ತಂದು ಮೊದಲು ಭಕ್ತಿಯಿಂದ ಪೂಜೆ ಮಾಡಿ ನಂತರ ಗುದ್ದಲಿಯನ್ನು ಭೂಮಿಗೆ ಹಾಕು ಎನ್ನುತ್ತಾನೆ. ಅಂದರೆ ಈ ವೇಳೆಯಲ್ಲಿ ಶುಭ ಸಂದರ್ಭದಲ್ಲಿ ಪೂಜೆಯನ್ನು ಮಾಡುವುದು ದೇವರನ್ನು ನೆನೆಯುವುದು ಸಹಜ ಮತ್ತು ಧಾರ್ಮಿಕತೆಯ ದೃಷ್ಟಿಯಿಂದಲ್ಲ ಮುಂದಿನ ಕೆಲಸದಲ್ಲಿ ಅಡಚಣೆಗಳಾಗದೆ ಶುಭವಾಗಲೆಂದು ದೇವರನ್ನು ಬೇಡಿಕೊಂಡು ನಂತರ ಕೆಲಸ ಆರಂಭಿಸುತ್ತಾರೆ. ಹಾಗೆಯೇ ಅಂದರೆ ಮಾದೇಶ್ವರ

ಹೇಳಿದ ಹಾಗೆಯೇ ಅವರು ದ್ರವ್ಯವನ್ನು ಹೊರತೆಗೆಯಲು ಹೊರಡುತ್ತಾರೆ. ಆ ನಂತರ ಅವರ ಮಕ್ಕಳು ಮತ್ತೆ ಮನೆಗೆ ಬರುತ್ತಾರೆ. ಮತ್ತೆ ಮೊದಲು ಎಷ್ಟು ಭಾಗ್ಯ, ಸಂಪತ್ತು, ನೆಮ್ಮದಿ ಸಂತೋಷವಿತ್ತೋ ಅದೇ ರೀತಿ ಭಾಗ್ಯ ಬಂದಿತು.

ಮುಂದೆ ಜುಂಜೇಗೌಡ ಮಾದೇಶ್ವರನ ಗುಡಿಯನ್ನು ಕಟ್ಟಿಸುತ್ತಾನೆ. ಅವನ ಒಕ್ಕಲಾಗುತ್ತಾನೆ. ಮಾದೇಶ್ವರ ಆಲಂಬಾಡಿ ಜುಂಜೇಗೌಡನಿಗೆ ಸಿರಿ ಸಂಪತ್ತನ್ನು ನೀಡುತ್ತಾನೆ. ಮುಖ್ಯವಾಗಿ ಇಲ್ಲಿ ವಿವರಿಸಬೇಕಾದ ಅಂಶವೆಂದರೆ ಒಬ್ಬ ಕೃಷಿಕನನ್ನು ಕೃಷಿ ಕುಟುಂಬವನ್ನು ದೇವರು ಇದ್ದಾನೆ ಎಂದು ನಂಬುವಂತೆ ಮಾಡುವುದು. ಆ ಮೂಲಕ ವ್ಯವಸ್ಥಿತವಾದ ನೈತಿಕತೆಯಿಂದ ಕೂಡಿದ ಸಮಾಜವನ್ನು ರೂಪಿಸುವುದು. ಜನರನ್ನು ದೇವರು ಧರ್ಮದ ಕಡೆಗೆ ಅವರ ಮನಸ್ಸನ್ನು ಸೆಳೆಯುವುದು. ಗಮನ ಹರಿಸುವಂತೆ ಮಾಡುವುದೇ ಮಾದೇಶ್ವರನ ಪ್ರಮುಖ ಸಾಂಸ್ಕೃತಿಕ ನಿಲುವೆಂದು ಗುರ್ತಿಸಬಹುದು. ಅಂದರೆ ಒಂದು ಕುಟುಂಬವನ್ನು ದೇವರ ಕಡೆಗೆ ಸೆಳೆದರೆ ಇಡೀ ಒಂದು ಸಮುದಾಯವೇ ದೇವರ ಕಡೆ ಬರುತ್ತದೆ ಎಂದು ತಿಳಿದ್ದಿದ್ದಾನೆ.

ಮಾದೇಶ್ವರ ತಾನು ಹುಟ್ಟಿನಿಂದ ನೆಲೆಗೊಳ್ಳುವ ಬೆಟ್ಟದವರೆಗೆ ಅನೇಕ ಊರುಗಳನ್ನು ಸಂಚರಿಸಿ ಆ ಊರಿನವರಲ್ಲಿ ಧಾರ್ಮಿಕ ಪ್ರಜ್ಞೆಯನ್ನು ಉಂಟುಮಾಡಿ ದೇವರ ಮಹತ್ವ ತಿಳಿಸುತ್ತಾನೆ. ಮಾದೇಶ್ವರ ಸ್ಥಳೀಯವಾಗಿಯೂ ಆರಾಧ್ಯ ದೈವವಾಗಿ ನೆಲೆಸಿ ಆ ಮೂಲಕ ಅವರಲ್ಲಿ ದೇವರ ಬಗ್ಗೆ ಭಕ್ತಿ ನೆಲೆಸುವಂತೆ ಮಾಡುತ್ತಾನೆ. ಏಳು ಮಲೆ ಬರುವಾಗ ಮಾದೇಶ್ವರ ಬಸವನಹಳ್ಳಿ ಎಂಬ ಊರಿನ ಮೂಲಕ ಬರುತ್ತಾನೆ. ಆ ಊರಿಗೆ ಬಂದಾಗ ಹುಡುಗರು ಗೋಲಿಗಜ್ಜುಗ ಆಟವನ್ನು ಆಡುತ್ತಿರುತ್ತಾರೆ. ಮಾದೇಶ್ವರನಿಗೂ ಆಟವಾಡುವ ಆಸೆ ಬರುತ್ತದೆ. ಆಗ ಊರಿನ ಹುಡುಗರಿಗೆ ತನ್ನನ್ನೂ ಆಟದಲ್ಲಿ ಸೇರಿಸಿಕೊಳ್ಳುವಂತೆ ಕೇಳುತ್ತಾನೆ. ಆಗ ಆ ಹುಡುಗರು ಆಟಕ್ಕೆ ಕರೆದುಕೊಳ್ಳುತ್ತಾರೆ. ಆಗ ಮಾದೇಶ್ವರ ಎಲ್ಲ ಹುಡುಗರಿಂದ ಗಜ್ಜುಗಳನ್ನು ಗೆದ್ದುಕೊಳ್ಳುತ್ತಾನೆ. ಆದರೆ ಹುಡುಗರ ಹತ್ತಿರ ಗಜ್ಜುಗಗಳು ಖಾಲಿಯಾಗುತ್ತದೆ. ಆಗ ಮಾದೇಶ್ವರನ ಮೇಲೆ ಜಗಳಕ್ಕೆ ಹೋಗುತ್ತಾರೆ. ಆಗ ಹುಡುಗರು ಮಾದೇಶ್ವರನಿಗೆ ಹೊಡೆಯುತ್ತಾರೆ. ಆಗ ಮಾದೇಶ್ವರನಿಗೆ ಕೋಪ ಬಂದು

"ಕಿಡ ಕಿಡನೆ ಕೋಪ ಕಾರ್‍ಕೊಂಡು
ಕೋಪ ಬಂದ ವ್ಯಾಳ್ಯದಲ್ಲಿ ನಮ್ಮಪ್ಪಾಜಿ ಮಾದೇಶ್ವರ
ಕೆಂಡಗಣ್ಣನ್ನು ಬಿಟ್ಟು ಹುಡುಗರನ್ನು ದ್ರಿಷ್ಟೀಸಿದ್ರಂತೆ
ಮಾದೇಶ್ವರ ಮೊಕುವನ್ನು ನೋಡುದ್ರು
ಅವುರ್‍ಗೆ ಎಲ್ಲೂ ಇಲ್ಲದ ಭಯಾಂಕಾರ ಉಂಟಾಯ್ತು
ಅಯ್ಯೋ ಅಯ್ಯೆಯ್ಯಪ್ಪೊ ಕೆಂಡಗಣ್ಣು
ಉರಿಗಣ್ಣು ಬುಟ್ಟವ್ನೆ ಕೆಂಡಗಣ್ಣ"[8]

ಹೊರಗಿನಿಂದ ಬಂದ ಹುಡುಗನೆಂದು ಎಲ್ಲರೂ ಹೊಡೆಯುವಾಗ ಮಾದೇಶ್ವರ ಈ ರೀತಿ ಪ್ರತಿಕ್ರಿಯಿಸುತ್ತಾನೆ. ಹೊರಗಿನಿಂದ ಬಂದವರನ್ನು ಮಾನವೀಯತೆಯ ದೃಷ್ಟಿಯಿಂದ ನೋಡುವಂತೆ ಈ

ಸನ್ನಿವೇಶದ ಮೂಲಕ ಎಲ್ಲರಿಗೂ ತಿಳಿಸುತ್ತಾನೆ. ಹುಡುಗರೆಲ್ಲ ಮಾದೇಶ್ವರನ ರೂಪವನ್ನು ನೋಡಿ ಹೆದರಿ ಓಡುತ್ತಿರುತ್ತಾರೆ. ಆಗ ಬಸವೇಗೌಡನ ಮಡದಿ ಬಸಮ್ಮ ತನ್ನ ಪತಿಗೆ ಊಟ ತೆಗೆದುಕೊಂಡು ಹೋಗುತ್ತಿರುತ್ತಾಳೆ. ಆಗ ಹುಡುಗರ ಗಾಬರಿಯನ್ನು ಕಂಡು ಬಸಮ್ಮ ವಿಚಾರ ತಿಳಿದುಕೊಳ್ಳುತ್ತಾಳೆ. ಕುತೂಹಲದಿಂದ ಹುಡುಗನನ್ನು ನೋಡಲು ಬಸಮ್ಮ ಬರುವಾಗ ಮಾದೇಶ್ವರ ಅಳುತ್ತಾ ನಿಂತಿರುತ್ತಾನೆ. ಏಕೆಂದರೆ ಹುಡುಗರು ಹೊಡೆದರು ಎಂಬ ಉತ್ತರ ಹೇಳುತ್ತಾನೆ. ಆಗ ಬಸಮ್ಮನಿಗೆ ಕರುಣೆ ಉಂಟಾಗಿ ಅವನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಬಸಮ್ಮನಿಗೂ ಮಕ್ಕಳಿಲ್ಲದ್ದರಿಂದ 'ನೀನು ಬಂದರೆ ನಿನ್ನ ಹೆತ್ತವರಿಗಿಂತ ಚೆನ್ನಾಗಿ ಸಾಕುತ್ತೇನೆ' ಎನ್ನುತ್ತಾಳೆ. ಮಾದೇಶ್ವರ ಅದಕ್ಕೆ ಒಪ್ಪಿ ಅವಳ ಮನೆಗೆ ಹೋಗುತ್ತಾನೆ. ಆಗ ಅವನಿಗೆ ಊಟಕ್ಕೆ ಮೊದಲು ಕೈತೊಳೆಯಲು ಬಿಸಿನೀರು ಕೊಡುತ್ತಾಳೆ. ಆಗ ಮಾದೇಶ್ವರ ಮುಖತೊಳೆದು ವಿಭೂತಿ ಕೇಳುತ್ತಾನೆ. ಆಗ ಬಸಮ್ಮ ವಿಭೂತಿ ಇಲ್ಲ ಎನ್ನುತ್ತಾಳೆ. ಮಾದೇಶ್ವರ ಒಲೆಯಲ್ಲಿರುವ ಬೂದಿಯನ್ನೇ ಧರಿಸುತ್ತಾನೆ. ಅವನು ಒಲೆಯಲ್ಲಿರುವ ಕೆಂಡವನ್ನೇ ತೆಗೆದು ಬೂದಿಯನ್ನಾಗಿ ಮಾಡಿ ಧರಿಸುತ್ತಾನೆ. ಮಾದೇಶ್ವರ ಅವರ ಮನೆಗೆ ಬಂದ ನಂತರ ಮನೆ ಹಾಲು ಸಾಗರವಾಗಿದೆ. ಒಂದು ದಿನ ಬಸವೇಗೌಡ ಹೊಲಕ್ಕೆ ಹೋಗಿರುವಾಗ ಮನೆಯಲ್ಲಿರುವ ಸೌದೆ ಮುಗಿದಿರುತ್ತದೆ. ಆಗ ಮಾದೇಶ್ವರನಿಗೆ ಸೌದೆ ತರಲು ಬಸಮ್ಮ ಹೇಳುತ್ತಾಳೆ. ಆಗ ಮಾದೇಶ್ವರ ನನಗೆ ಇದು ಅವಮಾನ, ನನ್ನ ಸಾಹಸವೇ ಗೊತ್ತಿಲ್ಲದೆ ಮಾತನಾಡುತ್ತಿದ್ದಾರಲ್ಲ ಎಂದು ತಿಳಿದು ಸೌದೆಯ ಬದಲಿಗೆ ಎಲ್ಲಾ ವಿಧವಾದ ಹಾವುಗಳನ್ನು ಒಂದು ಹೊರೆಕಟ್ಟಿಕೊಂಡು ಬರುತ್ತಾನೆ. ಆಗ ಬಸಮ್ಮ ಸಂತೋಷದಿಂದ ತನ್ನ ಮಗ ಸೌದೆ ತರುತ್ತಿದ್ದಾನೆ ಎಂದು ತಿಳಿಯುತ್ತಾಳೆ. ಆದರೆ ಅಡುಗೆ ಮನೆಗೆ ಹೋಗಿ ಹಾಕಿದ ನಂತರ ಬಸಮ್ಮನು ಅಡುಗೆ ಮಾಡಲು ಹೋದಾಗ ಎಲ್ಲವೂ ಹಾವುಗಳಾಗಿ ಮನೆಯ ತುಂಬೆಲ್ಲಾ ಹರಿದಾಡುತ್ತಿರುತ್ತದೆ. ಆಗ ಬಸಮ್ಮ ನೀನು ತಂದಿರುವುದು ಹಾವಿನ ಪಿಂಡಿಯೋ ಸೌದೆಯೋ ಎಲ್ಲಿ ಹಾವುಗಳಾಗಿದ್ದಾವೆ ಎನ್ನುತ್ತಾಳೆ. ಆಗ ಮಾದೇಶ್ವರ

"ತಮ್ಮಾಯ ಗುದ್ನಿಂದ ಹಾವಾಗಿದ್ದ ಹಾವ್ನೆಲ್ಲ
ಸೌದೆ ಮಾಡ್ಬುಟ್ಟು ಏನೂ ಕಾಣದಂತೆ
ಬೆಪ್ಪು ಮಾದೇವನಂತೆ
ಕೋಣೆಗೆ ಬಂದುಹೋದ್ರು"[9]

ನಂತರ ಬಸಮ್ಮ ಅಡುಗೆಯನ್ನು ಮಾಡುತ್ತಾಳೆ. ಊಟವನ್ನು ತೆಗೆದುಕೊಂಡು ಅವಳು ಮಾದೇಶ್ವರನೊಡನೆ ಹೊಲಕ್ಕೆ ಹೋಗುತ್ತಾಳೆ. ಮಾದೇಶ್ವರನೊಡನೆ ಎಲ್ಲರೂ ಊಟ ಮಾಡಿದ ಮೇಲೆ ಮಾದೇಶ್ವರ ಆಟಕ್ಕೆ ಹೋಗುತ್ತಾನೆ. ಅವನು ಹುಲಿಯ ಮೇಲೆ ಸವಾರಿ ಮಾಡುತ್ತಾ ಆಟವಾಡುತ್ತಿರುತ್ತಾನೆ. ಆಗ ಬಸಮ್ಮ ಮತ್ತು ಬಸವೇಗೌಡ ಇಬ್ಬರೂ ಮಾದೇಶ್ವರನನ್ನು ಹುಡುಕಿಕೊಂಡು ಹೋಗುತ್ತಾರೆ. ಆಗ ಮಾದೇಶ್ವರ ತಮ್ಮೊಂದಿಗೆ ಆಡುತ್ತಿದ್ದ ಹುಲಿಯನ್ನು ಕಲ್ಲಾಗಿಸಿದ್ದಾರೆ. ಸತಿಪತಿಗಳಿಬ್ಬರಿಗೂ ಮಾದೇಶ್ವರನ ಸಾಹಸ ಅರ್ಥವಾಯಿತು.

"ಅಯ್ಯೋ ಸ್ವಾಮಿ ಕೆಂಡಗಣ್ಣ
ನೀನು ಇಂತೆ ಮಾಯ್ಕಾರ ಅನ್ನೋದು ನಮಗೆ ಗೊತ್ತಾಗಿರಲ್ನಿಲ್ಲ

ನಮ್ಮ ಮನೆಯಲ್ಲಿ ನೀನು ಇದ್ದೆಯಲ್ಲ ಸ್ವಾಮಿ
ನಾವು ಏನೇನು ತಪ್ಪು ಮಾಡಿದ್ದೀವೋ ಕಾಣ್ವಲ್ಲ
ನಿಮ್ಮ ಪಾದಸೇವೆ ಮಾಡಿ ಕರ್ಮ ಕಳ್ಕೋತೀವಿ"[10]

ಎನ್ನುತ್ತಾರೆ. ಆಗ ಮಾದೇಶ್ವರ ಬಸಮ್ಮ ಮತ್ತು ಬಸವೇಗೌಡ ಇಬ್ಬರಿಗೂ ಕೂಡ ಗೌರವದಿಂದ ಹೇಳುತ್ತಾನೆ.

"ಅಮ್ಮ ಬಸಮ್ಮ ಅಪ್ಪ ಬಸವೇಗೌಡ
ಒಂದುಕಾಸಿನ ಧೂಪವನ್ನು ತಕ್ಕಳಕೋಸ್ಕರ
ನಾನು ನಿಮ್ಮನ್ನು ಒಕ್ಕಲು ಪಡೆದದ್ದಾಯಿತು.
ನನ್ನಾಸೆಯನ್ನು ನೀವು ಮರೀರಿ
ನಾನು ಮುಂದ್ಗೆ ಪಯಣ ಹೋಗುತ್ತೇನೆ"[11]

ಅಂದರೆ ಪ್ರತಿಯೊಂದು ಊರಿನಲ್ಲಿ ಕೂಡ ಒಂದೊಂದು ಒಕ್ಕಲನ್ನು ಪಡೆದು ಆ ಮೂಲಕ ಅವರನ್ನು ದೇವರು, ಧರ್ಮದ ಕಡೆಗೆ ಸೆಳೆಯುತ್ತಾನೆ. ತಾನು ಹೋದ ಊರಿನಲ್ಲೆಲ್ಲಾ ಒಂದೊಂದು ಹೆಸರಿನಿಂದ ಪೂಜಿಸಲ್ಪಡುತ್ತಾನೆ. ಮಾನವನಿಗೆ ದೇವರ ಬಗ್ಗೆ ಗಮನ ಭಯ ಭಕ್ತಿ ಇರಬೇಕೆಂದು ಮಾದೇಶ್ವರ ಹೇಳುತ್ತಾನೆ.

ಹೀಗೆ ಮಾದೇಶ್ವರ ಬುಡಕಟ್ಟು ಸಂಸ್ಕೃತಿಯಲ್ಲಿ ಕೃಷಿಕರಲ್ಲಿ ದೇವವ ಬಗ್ಗೆ ಗೌರವ ಬರುರಂತೆ ಮಾಡುತ್ತಾನೆ. ದೇವರ ಪ್ರಾಮುಖ್ಯತೆಯನ್ನು ಮನಗಾಣಿಸುತ್ತಾನೆ. ದೇವರನ್ನು ಪೂಜಿಸುವುದರಿಂದ ಅವನಿಗೆ ಒಕ್ಕಲಾಗುವುದರಿಂದ ಮಾನವರೂ ಕೂಡ ನೆಮ್ಮದಿಯಿಂದ ಇರಬಹುದು. ದೇವರ ಕೃಪೆ ಮನುಷ್ಯನಿಗೆ ಅನಿವಾರ್ಯವಾದದ್ದು ಎಂದು ಮಾದೇಶ್ವರ ಪ್ರತಿ ಸನ್ನಿವೇಶದಲ್ಲೂ ತಿಳಿಸುತ್ತಾನೆ.

"ಭಿಕ್ಷೆ ಅಂದರೆ ಲಕ್ಷ್ಯವಿಲ್ಲ
ದಾನವೆಂದರೆ ಜ್ಞಾನವಿಲ್ಲ"

ಎಂದು ಹೇಳಿದ್ದಾನೆ ಹಾಗಾಗಿ ಈ ಬಗ್ಗೆ ಯಾರಿಗೆ ಕಾಳಜಿ ಇಲ್ಲವೋ ವರನ್ನು ಶಿಕ್ಷಿಸುತ್ತಾನೆ. ಪ್ರತಿಯೊಬ್ಬರೂ ಕೂಡ ದೇವರನ್ನು ನಂಬಬೇಕು. ಆ ಮೂಲಕ ದಾನ ಇತ್ಯಾದಿಗಳಲ್ಲಿ ತೊಡಗಿಕೊಳ್ಳಬೇಕು ಎನ್ನುತ್ತಾನೆ. ಪ್ರತಿಯೊಬ್ಬರೂ ಜೀವನದಲ್ಲಿ ಕಾಳಜಿಯೊಂದಿಗೆ ಬದುಕಬೇಕು ಎನ್ನುತ್ತಾನೆ. ಹಾಗಾಗಿ ಅವನ ಉದ್ದೇಶ ಸಾಂಸ್ಕೃತಿಕವಾಗಿ ದೇವರು ಮತ್ತು ಧರ್ಮವನ್ನು ಪ್ರತಿಷ್ಠಾಪಿಸುವುದು ಜನಗಳನ್ನು ಧರ್ಮ ಮತ್ತು ದೇವವಿಂದ ಮಾತ್ರ ನೈತಿಕ ಚೌಕಟ್ಟಿನಲ್ಲಿ ಬಾಳಿಸಬಹುದು ಎಂದು ನಂಬುತ್ತಾನೆ. ಎಲ್ಲಿ ಅಧರ್ಮವಿದೆಯೋ ಅಲ್ಲಿ ಮಾದೇಶ್ವರ ಇರುತ್ತಾನೆ. ಅದನ್ನು ನಾಶಪಡಿಸಿ ಎಲ್ಲ ಸ್ಥಳಗಳಲ್ಲಿಯೂ ಧರ್ಮವನ್ನು ಸ್ಥಾಪಿಸುತ್ತಾನೆ. ತಾನು ಹೋದಲೆಲ್ಲಾ ಸ್ಥಳೀಯ ಗದ್ದುಗೆ ದೇವಸ್ಥಾನ ಇತ್ಯಾದಿಗಳ ರೂಪದಲ್ಲಿ ಪೂಜೆಸಲ್ಪಡುತ್ತಾನೆ.

# ಅಡಿಟಿಪ್ಪಣಿ

1. ಲಿಂಗಯ್ಯ .ಡಿ. ಜಾನಪದ ನೋಟಗಳು, ಸಿ.ವಿಜಿ ಪಬ್ಲಿಕೇಶನ್ಸ್, ಬೆಂಗಳೂರು ಮು - 2006 ಪು - 55
2. ರಾಜಶೇಖರ ಪಿ.ಕೆ. ಮಲೆಮಾದೇಶ್ವರ ಪುಟ - 452
3. ಅದೇ ಪುಟ 454
3. ಅದೇ ಪುಟ 458
4. ಅದೇ ಪುಟ 461
5. ಅದೇ ಪುಟ 463
6. ಅದೇ ಪುಟ 479
7. ಅದೇ ಪುಟ
8. ಅದೇ ಪುಟ 173
9. ಅದೇ ಪುಟ 181
10. ಅದೇ ಪುಟ 183
11. ಅದೇ ಪುಟ 183

# ಅಧ್ಯಾಯ - 6

# ದುಷ್ಟ ಶಿಕ್ಷಣ

ಮನುಷ್ಯನು ಸಂಪತ್ತಿನ ಆಸೆಗಾಗಿ ಬೇರೆಯವರಿಗೆ ಮೋಸ ಮಾಡುತ್ತಾನೆ, ಅನೇಕ ಸಾರಿ ಕೊಲ್ಲುತ್ತಾನೆ. ಈ ಕಾರಣಕ್ಕಾಗಿಯೇ ಕಳ್ಳತನ, ದರೋಡೆ, ಬೆದರಿಕೆ, ಅಪಹರಣ ಮೊದಲಾದವುಗಳು ಮೊದಲಿನಿಂದಲೂ ಇದೆ. ಬುಡಕಟ್ಟು ಜನಾಂಗದಲ್ಲೂ ಇದು ಇರಲಿಲ್ಲವೆಂದಲ್ಲ. ಈ ಎಲ್ಲ ಅಮಾನವೀಯವಾದ ಹಾನಿಕಾರ ದುಷ್ಟ ಅಂಶಗಳನ್ನು ನಿವಾರಿಸಲು ಮಾದೇಶ್ವರ ಪ್ರಯತ್ನ ಪಡುತ್ತಾನೆ. ಇಂತಹ ಅಂಶಗಳು ಮಾನವನ ಸಾಮಾಜಿಕ ಸಹಬಾಳ್ವೆಗೆ ಹಾನಿತರುವುದರಿಂದ ಮಾದೇಶ್ವರ ಅವುಗಳಿಗೆ ಅವಕಾಶ ಕೊಡುವುದಿಲ್ಲ. ಒಂದು ವೇಳೆ ಇಂತಹ ಅಂಶಗಳು ವರ್ತನೆಗಳು ಕಂಡುಬಂದರೆ ಅವರನ್ನು ಸುಧಾರಿಸಲು ಪ್ರಯತ್ನಿಸಿ ಮಿತಿಮೀರಿದರೆ ನಾಶಪಡಿಸುತ್ತಾನೆ. ಮುಂದಿನ ತಲೆಮಾರು ಇದನ್ನು ಗಮನಿಸಿ ಬದುಕಬೇಕೆನ್ನುವ ಸೂಚನೆ ನೀಡುತ್ತಾನೆ.

ಒಂದು ಸಂಸ್ಕೃತಿಯಲ್ಲಿ ಇಂತಹ ಹಲವಾರು ದುಷ್ಟ ಅಂಶಗಳು ಇದ್ದೇ ಇರುತ್ತವೆ. ಮಾದೇಶ್ವರ ಅಂತಹ ಅಂಶಗಳನ್ನು ನಿವಾರಿಸಲು ಮುಂದಾಗುತ್ತಾನೆ. ಆ ಮೂಲಕ ಸಂಸ್ಕೃತಿಯಲ್ಲಿನ ಹಾನಿಕಾರಕ ಅಂಶಗಳನ್ನು ಇಲ್ಲವಾಗಿಸುವುದರ ಮೂಲಕ ಸಂಸ್ಕೃತಿಯನ್ನು ಸುಧಾರಿಸುತ್ತಾನೆ. ಸಾಮಾಜಿಕ ಬದಲಾವಣೆಗೆ ಇದು ಅಗತ್ಯವೆಂಬುದು ಅವನ ಭಾವನೆ. ದುಷ್ಟರಿಗೆ ಎಂದಿದ್ದರೂ ಶಿಕ್ಷೆ ತಪ್ಪಿದ್ದಲ್ಲ ಎಂದು ತಿಳಿಸುತ್ತಾನೆ. ಈ ಅಂಶವನ್ನು ಮಹಾಕಾವ್ಯದಲ್ಲಿನ 'ಇಕ್ಕೇರಿ ದೇವಮ್ಮನ ಸಾಲು' ಮತ್ತು 'ದುಂಡಮ್ಮನ ಸಾಲು' ಪಠ್ಯಭಾಗದ ಮೂಲಕ ಮಾದೇಶ್ವರನ ನಿಲುವುಗಳನ್ನು ಸ್ಪಷ್ಟಪಡಿಸಬಹುದು.

ಮಾದೇಶ್ವರ ತನ್ನ ಜೀವಮಾನದ ಧೋರಣೆಗಳನ್ನು ನಿಲುವುಗಳನ್ನು ಹೀಗೆ ಸ್ಪಷ್ಟಪಡಿಸುತ್ತಾನೆ:

"ಏಳು ಮಲೆ ಕೈಲಾಸದ ಒಡೆಯ
ಏನೊಂದ್ಯೋಚನೆ ಮಾಡುತ್ತಾರೆ
ಮದ್ದಿಕ್ಕುವವರ ಮನೆಯಲ್ಲಿ ಅವ್ರ
ಮದ್ದಾನ್ನೆ ಮುರುದು ಬರಬೇಕು ।
ಇಸವಿಕ್ಕಿದವರ ಮನೆಯಲ್ಲಿ - ಅವ್ರ
ಸಿಸುಗಳ ಕೊಂದು ಬರಬೇಕು ।
ಹೊಟ್ಟೇಕಟ್ಟೋರ ಮನೆಯಲ್ಲಿ ಅವ್ರ
ಚಟಕ್ಕೆ ಕಟ್ಟಿ ಬರಬೇಕು ।
ಆಂಕಾರ ಪಟ್ಟೋರ ಮನೆಯಲ್ಲಿ - ಅವ್ರ
ಬೆಂಕೀಲಿ ಸುಟ್ಟು ಬರಬೇಕು
ಅನ್ಯಾಯ ಮಾಡೋ ಮುಂಡೇಮಕ್ಳ ಇನ್ನಿಲ್ಲದಂಗೆ ಮಾಡಬೇಕು"[1]

ಈ ಮಾತುಗಳನ್ನು ನೋಡಿದರೆ ಮಾದೇಶ್ವರನ ಉದ್ದೇಶವೇನೆಂದು ಅರ್ಥವಾಗುತ್ತದೆ. ಒಂದು

ಸಮುದಾಯದಲ್ಲಿ ಈ ವಿಧವಾದ ಸಮಾಜಘಾತಕ ಅಂಶಗಳಿದ್ದರೆ ಅದರಿಂದಾಗುವ ಅನಾಹುತಗಳ ಅರಿವು ಮಾದೇಶ್ವರನಿಗೆ ಸ್ಪಷ್ಟವಾಗಿದೆ. ಆದ್ದರಿಂದ ಈ ಬಗೆಯ ಎಲ್ಲ ವರ್ತನೆಗಳನ್ನು ಬುಡಸಮೇತ ಕೀಳುವುದೇ ಮಾದೇಶ್ವರ ಮೂಲ ಉದ್ದೇಶ. ಹಾಗಾಗಿ ತಾನು ಯಾವುದನ್ನು ಶಿಕ್ಷೆಯಿಂದ ದಮನಗೊಳಿಸಬೇಕು ಎಂಬುದರ ಅರಿವು ಮಾದೇಶ್ವರನಿಗಿದೆ. ವಿಷ ಇಕ್ಕುವವರು, ಮದ್ದಿಕ್ಕುವವರು ಜನರ ಸಂಪತ್ತನ್ನು ಲೂಟಿ ಮಾಡುತ್ತಿದ್ದರು. ಮಾದೇಶ್ವರನ ತಾಯಿ ಮಾದೇಶ್ವರ ಮನೆ ಬಿಟ್ಟು ಹೊರಟಾಗ 'ನೀನು ಯಾವ ಸೀಮೆಗಾದರೂ ಹೋಗು, ಆದರೆ ಬಡಕಾಲ ಸೀಮೆಗೆ ಹೋಗಬೇಡ, ಅಲ್ಲಿ ಮದ್ದಿಕ್ಕುವವರು, ವಿಷವಿಕ್ಕುವವರು ಇದ್ದಾರೆ' ಎಂದಿರುತ್ತಾಳೆ. ಹೀಗಾಗಿ ಮಾದೇಶ್ವರ ಬಡಗಲ ಸೀಮೆಗೆ ಬಂದು ವಿಷವಿಕ್ಕಿದವರ ಮನೆಗಳ ಶಿಶುಗಳನ್ನು ಕೊಲ್ಲಬೇಕು ಎಂದುಕೊಳ್ಳುತ್ತಾನೆ.

ಒಮ್ಮೆ ಮುಡುಕುತೊರೆ ಮಲ್ಲಣ್ಣ, ಪಟ್ಟದ ರಂಗಸ್ವಾಮಿ ಕರೆದುಕೊಂಡು ಮಾದೇಶ್ವರ ಭಿಕ್ಷೆಗೆ ಹೊರಡುತ್ತಾನೆ. ಇಕ್ಕೇರಿ ದೇವಮ್ಮನ ಮನೆಯ ಮುಂದೆ ನಿಂತು ಭಿಕ್ಷೆಯನ್ನು ಸಾರುತ್ತಾರೆ. ಇಕ್ಕೇರಿ ದೇವಮ್ಮ ಮನೆಯಿಂದ ಹೊರಗೆ ಬಂದು ನೋಡುತ್ತಾಳೆ. ಇವರಲ್ಲಿನ ಚಿನ್ನ ಬೆಳ್ಳಿ ಮುತ್ತು ರತ್ನವೆಲ್ಲ ಸಿಕ್ಕಿದಂತಾಗುತ್ತದೆ. ಇವರನ್ನು ಊಟಕ್ಕೆ ಕರೆದು ಕೊಲ್ಲಬೇಕು ಎಂದು ಆಲೋಚಿಸುತ್ತಾಳೆ. ಆಗ ಓಡಿಬಂದು ಅವರ ಪಾದಕ್ಕೆ ಶರಣು ಮಾಡುತ್ತಾಳೆ.

"ಸ್ವಾಮಿ ಎಂದೂ ಬರ್ದೋರು ಬಂದಿದ್ದೀರಲ್ಲಪ್ಪ
ಈವತ್ತು ಬಂದದ್ದು ಒಳ್ಳೇದಾಯ್ತು ಸ್ವಾಮಿ
ನಮ್ಮಲ್ಲಿ ಈವತ್ತುನ ದಿವ್ಸ ಒಂದೇವುರ ಕಾರ್ಯ ಅದೆ
ಊರಲೆಲ್ಲ ಭಿಕ್ಷಾ ಮಾಡ್ಕೊಂಡು
ಮದ್ದಾನದೊತ್ಗೆ ಬರಬೇಕು
ಮದ್ದಾನದೊತ್ಗೆ ಬಂದು ನಮ್ಮಲ್ಲಿ
ಭಿನ್ಯ ಅಳುದು ಹೋಗುಬೇಕು"[2]

ಅವಳ ಉದ್ದೇಶ ವಿಷವಿಕ್ಕಿ ಅವರನ್ನು ಕೊಲ್ಲುವುದು. ಆದರೆ ಅವಳು ಈ ಮೂವರನ್ನು ತನ್ನ ಮನೆಯೊಳಗೆ ಬಂದು ಊಟ ಮಾಡಬೇಕು ಎಂದು ಭಿನ್ನವಿಸುವ ರೀತಿ ಅತ್ಯಂತ ಸ್ವಾರಸ್ಯಕರವಾದದ್ದು. ಇವರು ಬೇರೆ ಏನೆ ಕಾರಣವನ್ನು ಹೇಳಿದರೂ ತನ್ನ ಮನೆಗೆ ಊಟಕ್ಕೆ ಬರುವುದಿಲ್ಲ. ಆದರೆ ದೇವರ ಹೆಸರನ್ನು ಹೇಳಿದರೆ ಮಾತ್ರ ಬರುತ್ತಾರೆ ಎಂದು ತಿಳಿದಿದ್ದಾಳೆ. ಅವಳು ಇದನ್ನು ಇನ್ನೂ ಕಲಾತ್ಮಕವಾಗಿ ಭಕ್ತಿಪೂರ್ವಕವಾಗಿಯೇ ಅವರ ಮುಂದೆ ಮುಂಡಿಸುತ್ತಾಳೆ. ಅವಳ ನಾಟಕ, ಅವರನ್ನು ಒಪ್ಪಿಸುವ ರೀತಿ ಇದನ್ನು ಗಮನಿಸಬೇಕು.

"ದಾಸಪ್ಪ ಗುಡ್ಡಪ್ಪನವುರೆ
ನಾನು ಹನ್ನೆರ್ಡೋರುಸ್ದಿಂದ ಹರ್ಕೆ ಮಾಡ್ಕೊಂಡಿದ್ದೆ
ಸ್ವಾಮಿ ದಾಸಪ್ಪ ಗುಡ್ಡಪ್ಪ ಗೊರವಯ್ಗಳ್ಗೆ
ಊಟುಕಿಕ್ಕೇನಿ ಅಂತ ಹಕ್ಕೆ ಮಾಡ್ಕೊಂಡಿದ್ದ ಸ್ವಾಮಿ

ನಮ್ಮನೆ ದೇವ್ರೆ ದಾಸಪ್ಪ ಗೊರವಯ್ಗಳ
ನಮ್ಮನೇ ಬಾಗುಲ್ಗೆ ಕರ್‍ಕೊಂಡ್ಬಂದಂಗಾಯ್ತು
ನನ್ನ ಮನೆಗೆ ಬರ್‍ಬೇಕು"[3]

ದೇವರು, ಹರಕೆ ಎಂದರೆ ಯಾರಾದರೂ ಸರಿಯೆ, ಊಟಕ್ಕೆ ಬರುತ್ತಾರೆ. ಅದರಲ್ಲೂ ದಾಸಯ್ಯ, ಗುಡ್ಡಪ್ಪ, ಗೊರವಯ್ಯಗಳು ದೇವರ ಗಾಢ ಭಕ್ತರೂ ಹಿಂಬಾಲಕರೂ ಆಗಿರುವುದರಿಂದ ಅವರು ಬಂದೇ ಬರುತ್ತಾರೆ. ಈ ಹಿನ್ನೆಲೆಯನ್ನು ಇಕ್ಕೇರಿ ದೇವಮ್ಮ ಉಪಾಯವಾಗಿ ದುರುಪಯೋಗಪಡಿಸಿಕೊಳ್ಳುತ್ತಾಳೆ. ಸಂಸ್ಕೃತಿಯಲ್ಲಿ ತಲೆತಲಾಂತರಗಳಿಂದ ಬರುವ ನಂಬಿಕೆಗಳನ್ನು ಇಕ್ಕೇರಿ ದೇವಮ್ಮನಂತಹವರು ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಾರೆ. ವಿಷದ ಕಜ್ಜಾಯವನ್ನು ಕೊಟ್ಟು ಇವರನ್ನು ಕೊಲ್ಲಬೇಕು ಎಂದು ದೇವಮ್ಮ ನಿರ್ಧರಿಸುತ್ತಾಳೆ. ಅವಳು ಮಕ್ಕಳನ್ನು ಕರೆದು ಮಧ್ಯಾನ್ನದವರೆಗೆ ನೀವು ಬರಬೇಡಿ, ಕಲಿಯುವ ಮಠಕ್ಕೆ ಹೋಗಿ ಎನ್ನುತ್ತಾಳೆ. ಜೀತಗಾರರನ್ನು ಕರೆದು ಇಂದು ನಿಮ್ಮ ಸಾಲ ತೀರುತ್ತದೆ. 'ನಾನು ಹೇಳಿದ ಕೆಲಸ ಮಾಡಬೇಕು' ಎನ್ನುತ್ತಾಳೆ.' ಆಗ ಅವರು ಅದಕ್ಕೆ ಒಪ್ಪುತ್ತಾರೆ. ಹಾವುಗಳನ್ನು ಹಿಡಿದು ತರುತ್ತಾರೆ. ಕಳ್ಳಿಹಾಲನ್ನು ತರುತ್ತಾರೆ. ಮನೆಯ ಹಿಂದೆ ಇರುವ ಹಿತ್ತಲಿನಲ್ಲಿ ಮೂರು ಹಳ್ಳವನ್ನು ತೆಗೆಯುತ್ತಾರೆ. ದೇವಮ್ಮ ತನ್ನ ಮನೆ ಸ್ವಚ್ಛಗೊಳಿಸಿ ರಂಗೋಲಿಯನ್ನು ಹಾಕಿ ಶೃಂಗರಿಸುತ್ತಾಳೆ. ವಿಷದ ಕಜ್ಜಾಯವನ್ನು ಒಂದು ಬುಟ್ಟಿಗೆ, ಒಳ್ಳೆಯ ಕಜ್ಜಾಯವನ್ನು ಇನ್ನೊಂದು ಬುಟ್ಟಿಗೆ ತೆಗೆದಿರಿಸುತ್ತಾಳೆ. ವಿಷದ ಕಜ್ಜಾಯವನ್ನು ಇನ್ನೊಂದು ಬುಟ್ಟಿಗೆ ತೆಗೆದಿರಿಸುತ್ತಾಳೆ. ವಿಷದ ಕಜ್ಜಾಯವನ್ನು ಕಳ್ಳೀಹಾಲು ಮತ್ತು ಹಾವಿನ ವಿಷದಿಂದ ತಯಾರಿಸುತ್ತಾಳೆ. ನಂತರ ದಾಸಪ್ಪ ಗೊರವಯ್ಯರನ್ನು ಹುಡುಕುತ್ತಾಳೆ. ಇದನ್ನು ಮಾದೇಶ್ವರ ಮುಡುಕುತೊರೆ ಮಲ್ಲಣ್ಣ, ಪಟ್ಟದ ರಂಗಸ್ವಾಮಿ ಜೊತೆಯಲ್ಲಿ ದೇವಮ್ಮನ ಮನೆಗೆ ಬರುತ್ತಾನೆ. ಇವಳ ಮನೆಗೆ ಬರುತ್ತಿರುವಾಗಲೇ ಮಾದೇಶ್ವರ ಅವರಿಬ್ಬರಿಗೂ 'ಇವತ್ತಿನ ದಿವ್ಸ ಮಾತ್ರ ಊಟ ಮಾಡಬೇಡಿ ಸಿಹಿ ತಿನ್ನಬೇಡಿ' ಎನ್ನುತ್ತಾನೆ. ಅವಳು ನಿಮಗಿಡುವ ಪದಾರ್ಥಗಳನ್ನು ಕೊಟ್ಟುಬಿಡಿ ಎನ್ನುತ್ತಾನೆ. ಮನೆಗೆಬಂದಾಗ ದೇವಮ್ಮ ಪನ್ನೀರಿನಿಂದ ಪಾದವನ್ನು ತೊಳೆದು ಮಂದಲಿಗೆಯನ್ನು ಹಾಸುತ್ತಾಳೆ.

"ಇಸದ ಕಜ್ಜಾಯ ತಂದವುಳೆ
ಎಡುಪಡುಸವ್ಳೆ ದೇವಮ್ಮ
ಪಚ್‌ಬಾಳೆಹಣ್ಣ ತಂದವ್ಳೆ
ಸಿಪ್ಪೆ ಕಳ್ಳು ಪಡುಸವ್ಳೆ
ಇಸದ ತುಪ್ಪ ತಂದವ್ಳೆ
ಅಗಲ್ಗಾದರೆ ಪಡುಸವ್ನೆ
ಕರ್ಪೂರ ಸಾಂರಾಣಿ ಹಸ್ತವುಳ್ಳೆ
ಕರವೆತ್ತಿ ಕೈಯ ಮುಗುದವ್ಳೆ"[4]

ವಿಷದ ಕಜ್ಜಾಯವನ್ನು ತಂದು ಇಡುವಾಗಲೂ ದೇವಮ್ಮ ಭಕ್ತಿಪೂರ್ವಕವಾಗಿಯೇ ಊಟ ಬಡಸುತ್ತಿದ್ದಾಳೆ ಎಂದೇ ಅತಿಥಿಗಳು ಭಾವಿಸುವಂತೆ ದೇವಮ್ಮ ನಟಿಸುತ್ತಾಳೆ. ಊಟಕ್ಕೆ ಬಡಿಸಿ ಕರ್ಪೂರ, ಸಾಂರಾಣಿ ಹಚ್ಚುತ್ತಾಳೆ. ಈ ಪ್ರಕ್ರಿಯೆಯಲ್ಲಿಯೇ ಅತಿಥಿಗಳು ಇವಳು ನಿಜಕ್ಕೂ ಹರಕೆ ಮಾಡಿಕೊಂಡಿದ್ದಾಳೆ ಎಂದು ಭಾವಿಸಲಿ

ಎಂಬಂತೆ ನಟಿಸುತ್ತಾಳೆ. ವಿಷದ ಕಜ್ಜಾಯವನ್ನು ಮಲ್ಲಣ್ಣ ಮತ್ತು ರಂಗಸ್ವಾಮಿ ಇಬ್ಬರೂ ಮಾದೇಶ್ವರನಿಗೆ ನೀಡಿದರು. ಆಗ ಮಾದೇಶ್ವರ ತನ್ನ ಜೋಳಿಗೆಗೆ ಇಟ್ಟುಕೊಳ್ಳುತ್ತಾನೆ. ಅನ್ನ ಸಾರಿಗೆಲ್ಲ ವಿಷವನ್ನು ಹಾಕಿದ್ದಾಳೆ. ಊಟವನ್ನು ಮಾಡಿ ಮೂವರು ಅವಳಿಗೆ ಶಾಪವನ್ನು ಕೊಟ್ಟು ಬರುತ್ತಾರೆ. ದೇವಮ್ಮ ನಾಳೆಯೂ ಊಟಕ್ಕೆ ಬರುವಂತೆ ಒತ್ತಾಯಿಸುತ್ತಾಳೆ. ಇವರು ಹೋದನಂತರ ನಟಿಕೆ ನರಕುತ್ತಾಳೆ.

ಅವಳ ಮೊದಲನೆ ಸೋಲು ಇಲ್ಲಿಯೇ ಆರಂಭವಾಗಿದೆ. ಈಗ ಅವಳದ್ದು ಅತ್ಯಂತ ಅವಮಾನದ ಪ್ರಸಂಗ. ಈಗಿನವರೆಗೆ ಅತಿಯಾಸೆ ಉಳ್ಳವಳಾಗಿದ್ದಳು. ಆದರೆ ಈಗ ಅದು ನಿರಾಸೆಯಾಗಿದೆ. ಒಂದು ಕಡೆ ಇವರ ಆಭರಣಗಳಿಗಾಗಿ ಸಂಪತ್ತಿಗಾಗಿ ತನ್ನ ಮನೆಯಲ್ಲಿ ಬಿಟ್ಟಿ ಊಟ ಹಾಕಿ ಅದನ್ನು ಕಳೆದುಕೊಳ್ಳುತ್ತಾಳೆ. ಇನ್ನೊಂದು ಕಡೆ ತನ್ನ ಮನೆಯಲ್ಲಿ ಜೀತಕ್ಕಿದ್ದ ಜೀತಗಾರರನ್ನು ಕಳುಹಿಸಿದ್ದಾಳೆ. ಮಾದೇಶ್ವರನು ಬಹಳ ವ್ಯವಸ್ಥಿತವಾಗಿಯೇ ಇಂತಹ ವಿಷವಿಕ್ಕುವವರಿಗೆ ಬುದ್ಧಿಯನ್ನು ಕಲಿಸುತ್ತಾನೆ.

ಇಕ್ಕೇರಿ ದೇವಮ್ಮನ ತಂಗಿಯಾದ ಚಿಕ್ಕದೇವಮ್ಮನಿಗೆ ಮಾದೇಶ್ವರ ಅಕ್ಕನ ಮನೆಗೆ ಹೋಗುವಂತೆ ಮನಸ್ಸು ಕೊಡುತ್ತಾರೆ. ಚಿಕ್ಕದೇವಮ್ಮ ಅಕ್ಕನ ಮನೆಗೆ ಹೊರಡುತ್ತಾಳೆ. ಇಕ್ಕೇರಿಯ ಹೊರಗೆ ಒಂದು ಕಟ್ಟೆಯ ಮೇಲೆ ಮಾದೇಶ್ವರ, ಮಲ್ಲಣ್ಣ, ರಂಗಸ್ವಾಮಿ ಕುಳಿತಿರುತ್ತಾರೆ. ಆಗ ಚಿಕ್ಕದೇವಮ್ಮ ಅಕ್ಕನ ಮನೆಗೆ ಹೋಗುತ್ತಿರುವಾಗ ಮಕ್ಕಳಿರುವ ಮನೆಗೆ ಬರಿಗೈಯ್ಯಲ್ಲಿ ಹೋಗಬಹುದ ಎಂದು ಮಾದೇಶ್ವರನೆ ವಿಷದ ಕಜ್ಜಾಯಗಳನ್ನು ಕೊಡುತ್ತಾನೆ. ಈ ಕಜ್ಜಾಯಗಳನ್ನು ಚಿಕ್ಕದೇವಮ್ಮ ಅಕ್ಕನ ಮಕ್ಕಳಿಗೆ ಕೊಡುತ್ತಾಳೆ. ಆಗ ಇಕ್ಕೇರಿ ದೇವಮ್ಮನ ಮಕ್ಕಳು ಅಲ್ಲೆ ಸತ್ತು ಬೀಳುತ್ತವೆ. ದೇವಮ್ಮನ ವಿಷದ ಕಜ್ಜಾಯಗಳು ಅವಳ ಮಕ್ಕಳ ಪ್ರಾಣವನ್ನೇ ತೆಗೆಯುತ್ತವೆ. ಅವಳು ಬೇರೆಯವರನ್ನು ಸಾಯಿಸಲು ಉದ್ದೇಶಿಸಿದ್ದಳು. ಆದರೆ ಈಗ ಅವಳ ಮಕ್ಕಳೆ ಸತ್ತವು. ಅಂದರೆ ನಾವು ಬೇರೆಯವರಿಗೆ ಕೇಡನ್ನು ಬಯಸಿದರೆ ಆ ಕೇಡು ನಮ್ಮನ್ನೆ ತಿನ್ನುತ್ತದೆ ಈ ಮಾತು ಹೆಚ್ಚು ದೇವಮ್ಮನಿಗೆ ಅನ್ವಯಿಸುತ್ತದೆ.

ಇಕ್ಕೇರಿ ದೇವಮ್ಮ ತನ್ನ ತಂಗಿಯೊಂದಿಗೆ ಜಗಳವಾಡುತ್ತಾಳೆ. ಇದನ್ನು ಮಾದೇಶ್ವರ ಪಂಚಾಯಿತಿ ಮೂಲಕ ಬಗೆಹರಿಸುತ್ತಾನೆ. ವಿಷದ ಕಜ್ಜಾಯವನ್ನು ಮಾದೇಶ್ವರ ತಿಂದು ಇದು ವಿಷದ ಕಜ್ಜಾಯವಲ್ಲ ಎನ್ನುತ್ತಾನೆ. ಚಿಕ್ಕದೇವಮ್ಮ ದಾಸಪ್ಪ, ಗೊರವಯ್ಯ ಕೊಟ್ಟ ಕಜ್ಜಾಯವನ್ನು ಕೊಟ್ಟಿರುವುದಾಗಿ ಹೇಳುತ್ತಾಳೆ. ಚಿಕ್ಕದೇವಮ್ಮನನ್ನು ನೀನು ಊರಿಗೆ ಹೋಗು ಎನ್ನುತ್ತಾರೆ. ದೇವಮ್ಮ ತನ್ನ ಮಕ್ಕಳನ್ನು ಗಾಡಿ ಮೇಲೆ ಏರಿಕೊಂಡು ಹೋಗಿ ಸಾಲು ಸಮಾಧಿ ಮಾಡುತ್ತಾಳೆ. ಬೆಳಗ್ಗೆ ಮನೆ ಬಾಗಿಲು ತೆಗೆಯುವಷ್ಟರಲ್ಲಿ ಹುಲಿಗಳು ಸಮಾಧಿಯಿಂದ ಮಕ್ಕಳನ್ನು ತಂದು ಮನೆ ಬಾಗಿಲಿಗೆ ಹಾಕಿ ಕಾವಲಿರುತ್ತವೆ. ಹೀಗೆ ದೇವಮ್ಮನಿಗೆ ಸರಣಿ ಸೋಲು, ಶಿಕ್ಷೆ ಅವಮಾನಗಳನ್ನು ಮಾದೇಶ್ವರ ನೀಡುತ್ತಾನೆ. ಕೊನೆಗೆ ಅವಳನ್ನು ಒಂದು ಕಲ್ಲಾಗುವಂತೆ ಮಾಡಿ ಅವಳ ಇಡೀ ಮನೆ ಉರಿದುಹೋಗುವಂತೆ ಶಾಪ ಕೊಡುತ್ತಾನೆ.

ಹೀಗೆ ಇಕ್ಕೇರಿ ದೇವಮ್ಮನಿಗೆ ಮಾದೇಶ್ವರ ಶಿಕ್ಷೆ ಕೊಡುತ್ತಾನೆ. ಸಾಂಸ್ಕೃತಿಕವಾಗಿ ಮಾದೇಶ್ವರ ದುಷ್ಟರ ಬಗ್ಗೆ ಯಾವ ಅಭಿಪ್ರಾಯ ಹೊಂದಿದ್ದಾನೆ. ಅವರನ್ನು ಹೇಗೆ ಶಿಕ್ಷಿಸುತ್ತಾನೆ ಎಂಬುದಕ್ಕೆ ಈ ಸನ್ನಿವೇಶ ಅತ್ಯುತ್ತಮ ಉದಾಹರಣೆಯಾಗಿದೆ. ಹೀಗೆ ದುಷ್ಟರು ಹೆಚ್ಚಾದಾಗ ಅವರನ್ನು ಶಿಕ್ಷಿಸಲು ದೈವ ಪುರುಷ ಜನ್ಮ ತಾಳುತ್ತಾನೆ ಎಂಬುದು ಒಂದು ನಂಬಿಕೆ. ಈ ನಂಬಿಕೆ ಮಾದೇಶ್ವರನ ಸನ್ನಿವೇಶದಲ್ಲಿ ಹೆಚ್ಚು ಪ್ರಸ್ತುತವಾಗುತ್ತದೆ. ಹೀಗೆ ನಾಶಮಾಡಿದ ಮೇಲೆ ಸ್ವತಃ ಮಾದೇಶ್ವರನೇ ತಾನು ಮಾಡಿದ ದುಷ್ಟ ಶಿಕ್ಷಣದ ಬಗ್ಗೆ ಹೀಗೆ ಹೇಳುತ್ತಾನೆ.

"ವಿಷವಿಕ್ಕಿದವರ ಮನೆ ನಾಶನ ಮಾಡಿದಂತ ಮಾದೇಶ್ವರ ನಾನು
ಮದಿಕ್ಕಿದವರ ಮನೆ ಮದ್ಯಾನ್ನೆ ಸರಿಮಾಡಿದಂತ ಮಾದೇಶ್ವರ ನಾನು"[5]

ಅಂದರೆ ಮಾದೇಶ್ವರ ತಾನು ಹೊಂದಿದ ಉದ್ದೇಶದಲ್ಲಿ ಎಲ್ಲಿಯೂ ಸೋಲನ್ನು ಕಂಡಿಲ್ಲ. ಅದನ್ನು ಸಾಧಿಸಿದ್ದಾನೆ. ಈ ಉದ್ದೇಶವನ್ನು ನಿಭಾಯಿಸಿದ ಎಂದು ಸ್ಪಷ್ಟಪಡಿಸಲು ಕಾವ್ಯದಲ್ಲಿಯೇ ಇನ್ನೊಂದು ಪಠ್ಯಭಾಗವಿದೆ ಅದು ದುಂಡಮ್ಮನ ಸಾಲು. ಬೇಡರ ಮಾರಯ್ಯನ ಮಗಳು ದುಂಡಮ್ಮ ಅತ್ಯಂತ ಸುಂದರಿ. ಕಾವ್ಯವೇ ಅವಳ ಸೌಂದರ್ಯವನ್ನು ಹೀಗೆ ವರ್ಣಿಸುತ್ತದೆ.

"ದುಂಡಮ್ಮನೆಂಬೋಳು ಮಾದೇವು
ದುಂಡಾನೆ ಮೋಕುದೋಳು ಮಾದೇವು
ಸಂಪೀಗೆ ಮೂಗೋಳು ಮಾದೇವು
ಕೆಂಪಾನೆ ತುಟಿಯೋಳು ಮಾದೇವು
ಚಿಗುರೀನ ಕಣ್ಣೋಳು ಮಾದೇವು
ಬುಗುರೀಯ ನುಡಿಯೋಳು
ಮಾರುದ್ದ ಜಡಮುಡಿ ಮಾದೇವು"[6]

ಸೌಂದರ್ಯವೇ ಮೈವೆತ್ತಂತ ದುಂಡಮ್ಮ ಒಮ್ಮೆ ಹೊಳೆಗೆ ಹೋಗಿ ಸ್ನಾನ ಮಾಡುವಾಗ ಒಂದು ತಲೆಗೂದಲು ಕಿತ್ತುಕೊಂಡು ನೀರಿನಲ್ಲಿ ತೇಲಿಕೊಂಡು ಹೋಯಿತು. ಅದೇ ಸಮಯದಲ್ಲಿ ಕೊಂಗರ ದೊರೆ ಬೇಟೆಗೆ ಬಂದಿರುತ್ತಾನೆ. ಅವನು ಬೇಟೆಗಾಗಿ ಕಾಡಿನಲ್ಲಿ ಸುತ್ತಿ ಬಾಯಾರಿಕೆಯಿಂದ ನೀರು ಕುಡಿಯಲು ಹೊಳೆಗೆ ಇಳಿಯುತ್ತಾನೆ. ಆಗ ದುಂಡಮ್ಮನ ತಲೆಗೂದಲು ಅವನ ಕೈ ಸೇರುತ್ತದೆ. ಇದರಿಂದ ಆಕರ್ಷಿತನಾದ ಅರಸ, ಅವಳನ್ನು ಹುಡುಕಿಕೊಂಡು ಬರುತ್ತಾನೆ. ಹೀಗೆ ಬರುವಾಗ ಬೇಡರ ಗುಂಪೊಂದು ಅದೇ ಮಾರ್ಗವಾಗಿ ಬರುತ್ತಿರುತ್ತದೆ. ಅವರು ಇದು ಬೇಡರ ಮಾರಯ್ಯನ ಮಗಳಾದ ದುಂಡಮ್ಮನ ತಲೆಗೂದಲು ಎಂದು ಹೇಳುತ್ತಾರೆ. ಅವಳ ಮನೆಯನ್ನೂ ತೋರಿಸುತ್ತಾರೆ. ಕೊಂಗರಸ ದಾಸಯ್ಯನ ವೇಷದಲ್ಲಿ ದುಂಡಮ್ಮನ ಮನೆಗೆ ಬರುತ್ತಾನೆ. ಭಿಕ್ಷೆಯನ್ನು ಕೇಳುತ್ತಾನೆ, ಭಿಕ್ಷೆ ನೀಡಲು ಬಂದ ದುಂಡಮ್ಮನನ್ನು ಮನೆಯಲ್ಲಿ ಯಾರೂ ಇಲ್ಲ ಎಂಬುದನ್ನು ಖಚಿತಪಡಿಸಿಕೊಂಡ ಮೇಲೆ ತೋಳಿನಿಂದ ಬಾಚಿಕೊಂಡು ಕುದುರೆ ಮೇಲೆ ಹೋಗುತ್ತಾನೆ. ಅವಳನ್ನು ಅಪಹರಿಸುತ್ತಾನೆ. ಮನೆಯಲ್ಲಿ ಯಾರೂ ಇರದ ವೇಳೆ ದಾಸಯ್ಯನಂತೆ ಬಂದು ಒಬ್ಬ ಅಸಹಾಯಕ ಹೆಣ್ಣನ್ನು ಕೊಂಗದೊರೆ ಅಪಹರಿಸುತ್ತಾನೆ. ರಾಜರುಗಳಿಗೆ ಯಾರ ಭಯವೂ ಇಲ್ಲದ್ದರಿಂದ ಈ ರೀತಿಯ ದುಷ್ಟಕೃತ್ಯಗಳಿಗೆ ಮುಂದಾಗುತ್ತಾರೆ. ಈ ಎಲ್ಲ ದುಷ್ಟರನ್ನು ಶಿಕ್ಷಿಸಲೆಂದೇ ಮಾದೇಶ್ವರ ಇದ್ದಾನೆ. ಕೊಂಗರಸು

ಎತ್ತಿಕೊಂಡು ಹೋಗುವಾಗ ದುಂಡಮ್ಮನ ಆಳು ಬೇಡರ ಕನ್ನಪ್ಪನಿಗೆ ಕೇಳುತ್ತದೆ. ಅವನು ಬಂದು ಮಾದೇಶ್ವರನಿಗೆ ಹೇಳುತ್ತಾನೆ. ಆಗ ಮಾದೇಶ್ವರ ಹೋಗಿ ದುಂಡಮ್ಮನನ್ನು ರಕ್ಷಿಸಿ ಕೊಂಗರಸನನ್ನು ಒಂದು ಕಲ್ಲು ಮಾಡುತ್ತಾರೆ. ದುಂಡಮ್ಮನನ್ನು ಬೇಡರ ಕನ್ನಯ್ಯನಿಗೆ ಮದುವೆ ಮಾಡಿಸುತ್ತಾನೆ.

ಮಾದೇಶ್ವರ ತನ್ನ ಸಾಂಸ್ಕೃತಿಕ ನಿಲುವುಗಳನ್ನು ದುಷ್ಟರನ್ನು ಶಿಕ್ಷಿಸುವುದೇ ಅವನ ಪ್ರಧಾನ ಉದ್ದೇಶ. ಆದಕ್ಕಾಗಿ ಅವನ ಉದ್ದೇಶವನ್ನು ಈ ಮೊದಲೇ ವಿವರಿಸಿದೆ. ಏಕೆಂದರೆ "ವಿಷವಿಕ್ಕಿದವರ ಮನೆಗಳ ಶಿಶುಗಳ ಕೊಲ್ಲಬೇಕು." ಮದ್ದಿಕ್ಕಿದವರ ಮದ್ಯಾನ್ಕೆ ಮುರೀಬೇಕು ಇತ್ಯಾದಿ ಈ ಬಗೆಯ ದುಷ್ಟರನ್ನು ಶಿಕ್ಷಿಸುವ ನಿಗ್ರಹಿಸುವ ಧೋರಣೆಯಲ್ಲಿ ಮಾದೇಶ್ವರ ಎಂತಹ ಸಂದರ್ಭದಲ್ಲಿಯೂ ರಾಜಿಗೂ ಒಳಗಾಗುವುದಿಲ್ಲ. ಮಾದೇಶ್ವರನ ಪ್ರಧಾನ ಧ್ಯೇಯವೇ ದುಷ್ಟರನ್ನು ಶಿಕ್ಷಿಸಿ ನಾಶಪಡಿಸಿ ಶಿಷ್ಟರನ್ನು ರಕ್ಷಿಸುವುದು.

## ಅಡಿಟಿಪ್ಪಣಿ

1. ರಾಜಶೇಖರ ಪಿ.ಕೆ. (ಸಂ) ಮಲೆಯ ಮಾದೇಶ್ವರ ಸಂ-1, ಪುಟ - 403
2. ಅದೇ ಪುಟ 409
3. ಅದೇ ಪುಟ 409
4. ಅದೇ ಪುಟ 415
5. ಲಿಂಗಯ್ಯ ಡಿ., ಸಂಧ್ಯಾರೆಡ್ಡಿ ಕೆ.ಆರ್. (ಸಂ) ಜಾನಪದ : ಸ್ವರೂಪ ಮತ್ತು ಸಾಹಿತ್ಯ ಕನ್ನಡ ಸಾಹಿತ್ಯ ಪರಿಷತ್ತು ಮು - 2006 ಪುಟ - 230
6. ರಾಜಶೇಖರ ಪಿ.ಕೆ. ಮಲೆಮಾದೇಶ್ವರ ಸಂ-2, ಪುಟ - 726

# ಅಧ್ಯಾಯ - 7
# ಅತಿಮಾನುಷ ಅಂಶಗಳು

ಮಾದೇಶ್ವರ ತನ್ನ ಸಮುದಾಯದ ಜೀವನಕ್ರಮ ಸುಧಾರಿಸಲು ಮತ್ತು ತನ್ನ ಒಕ್ಕಲುಗಳನ್ನಾಗಿ ಮಾಡಿಕೊಳ್ಳಲು ಅನೇಕ ಪ್ರಯತ್ನಗಳನ್ನು ಮಾಡುತ್ತಾನೆ. ಅವು ಯಾವುವೂ ಪ್ರಯೋಜನಕ್ಕೆ ಬರದಾಗ ಅನಿವಾರ್ಯವಾಗಿ ಪವಾಡಗಳನ್ನು ಎಸಗುತ್ತಾನೆ. ಪವಾಡಗಳನ್ನು ಅವಲೋಕಿಸುವುದೇ ಈ ಅಧ್ಯಾಯದ ಮುಖ್ಯ ಉದ್ದೇಶ. ಜನರು ನಂಬಿಕೆಯ ಪ್ರತೀಕವಾಗಿ ಅಥವ ಕೇಳಿದ ಅದ್ಭುತ ಸಂಗತಿಗಳನ್ನು ಪವಾಡಗಳೆಂದು ಹೇಳುವುದುಂಟು. ಐತಿಹಾಸಿಕ ವ್ಯಕ್ತಿಯನ್ನು ಪವಾಡಗಳು ಪುರಾಣ ಪುರುಷನನ್ನಾಗಿ ಮಾಡುತ್ತವೆ. ಮಾದೇಶ್ವರ ತಾನು ಹುಟ್ಟಿನಿಂದಲೇ ಪವಾಡಗಳನ್ನು ಆರಂಭಿಸುತ್ತಾನೆ. ತಾನು ಬಂದು ನೆಲೆಸುವಲ್ಲಿ, ನಂತರ ಭಕ್ತರನ್ನು ಕಾಪಾಡುವಲ್ಲಿ, ದುಷ್ಟರನ್ನು ಶಿಕ್ಷಿಸುವಲ್ಲಿ, ಒಕ್ಕಲುಗಳನ್ನು ಪಡೆಯುವಲ್ಲಿ ಪ್ರಧಆನವಾಗಿ ಪವಾಡಗಳನ್ನು ಎಸಗುತ್ತಾನೆ. ಮುಖ್ಯ ಅಂಶವೆಂದರೆ ಅವನು ಜನಿಸುವುದೇ ಪವಾಡದಿಂದ.

ಮಾದೇಶ್ವರನ ತಾಯಿ ಉತ್ತರಾಜಮ್ಮನು ಒಂದು ಮಾವಿನ ಹಣ್ಣನ್ನು ತಿಂದಾಗ ಅದರ ಮೂಲಕ ಮಾದೇಶ್ವರ ಅವಳ ಗರ್ಭ ಸೇರುತ್ತಾನೆ. ಜನಿಸುವಾಗ ಉತ್ತರಾಜಮ್ಮನ ಬೆನ್ನ ಮೇಲಿರುವ ಒಂದು ಕಪ್ಪು ಚಕ್ಕೆಯನ್ನು ಸೀಳಿ ಹೊರಬರುತ್ತಾನೆ. ಗರ್ಭದಲ್ಲಿರುವಾಗಲೇ ತಾಯಿಯೊಂದಿಗೆ ಮಾತನಾಡುತ್ತಾನೆ. ಹುಟ್ಟಿದ ನಂತರ ತನ್ನ ತಾಯಿಯ ದೇಹ ಮೊದಲಿನಂತೆಯೇ ಹಾಗಲಿ ಎಂದು ಹೇಳುತ್ತಾನೆ. ಹಾಗೆಯೇ ಆಗುತ್ತದೆ. ಕಲ್ಯಾಣದೇವರು ಬಂದು ಮಗುವನ್ನು ನೋಡಿ ಇವನು ಏಳು ವಷ7ದ ನಂತರ ಮನೆಯಲ್ಲಿರುವುದಿಲ್ಲ ಎಂದುಕೊಂಡು ಮಾದೇಶ್ವರನಿಗೆ ಉತ್ತಾಜಮ್ಮನ ಕೈಯಿಂದಲೇ ವಿಷವನ್ನು ಕೊಡಿಸುತ್ತಾನೆ. ಆದರೆ ಮಾದೇಶ್ವರ ಮತ್ತೆ ಮನೆಗೆ ಬರುತ್ತಾನೆ. ಮಾದೇಶ್ವರ ವಿಷ ಕುಡಿದರೂ ಬದುಕುಳಿಯುತ್ತಾನೆ.

ಕಾವೇರಿ ನದಿಯನ್ನು ದಾಟುವ ಸಂದರ್ಭದಲ್ಲಿ ಅಂಬಿಗುರ ಮೀನು ಹಿಡಿಯುತ್ತಿರುತ್ತಾರೆ. ಆಗ ಅವನರ್ನು ಮಾದೇಶ್ವರ ನದಿ ದಾಟಿಸಬೇಕೆಂದು ಕೇಳುತ್ತಾನೆ. ಆದರೆ ಅವರು ಮಾದೇಶ್ವರನನ್ನು ಅಪಹಾಸ್ಯ ಮಾಡಿ ಬಯ್ಯುತ್ತಾರೆ. ಆಗ ಮಾದೇಶ್ವರ ಅವರಿಗೆ ಶಾಪವನ್ನು ಕೊಡುತ್ತಾರೆ. ಆಗ ಅಂಬಿಗರು ಅವನನ್ನು ದೋಣಿಯ ಹಾಯುಗೋಲನ್ನು ತೆಗೆದುಕೊಂಡು ಹೊಡೆಯಲು ಬರುತ್ತಾರೆ. ಆಗ ಮಾದೇಶ್ವರ ತನ್ನ ಹೆಗಲಮೇಲಿರುವ ಎಳಗಾವಿಯನ್ನು ನೀರಿನ ಮೇಲೆ ಹಾಸಿ ಅದರ ಮೇಲೆ ಕುಳಿತು ತೇಲಿಕೊಂಡು ಆಚೆ ದಡಕ್ಕೆ ಹೋಗುತ್ತಾರೆ.

ಪಿರಿಯಾಪಟ್ಟಣದ್ಲಿಲ ಈರೇಗೌಡ ಅನ್ನುವವನನ್ನು ಒಕ್ಕಲಾಗಿ ಪಡೆಯಲು ಮಾದೇಶ್ವರ ನಿಶ್ಚಯಿಸುತ್ತಾನೆ. ಮಾದೇಶ್ವರನು ನೆಲೆಗೊಂಡಿರುವ ಹುತ್ತಕ್ಕೆ ಈರೇಗೌಡನ ಹಸು ಬಂದು ಹಾಲು ಕರೆಯುತ್ತದೆ. ನಂತರ ಮನೆಯಲ್ಲಿ ಅದು ರಕ್ತವನ್ನು ಕರೆಯುತ್ತದೆ. ಇದನ್ನು ಪತ್ನಿ ಈರೇಗೌಡನಿಗೆ ತಿಳಿಸುತ್ತಾಳೆ. ಈರೇಗೌಡ ಜೀತಗಾರರೊಡನೆ ಹೋಗಿ ಹಸುವನ್ನು ಕಾವಲು ಕಾಯುತ್ತಾನೆ. ಹಸು ಹುತ್ತಕ್ಕೆ ಹಾಲು ಕರೆಯುತ್ತಿರುತ್ತದೆ.

ಸುರಿಯಲಾರಂಭಿಸುತ್ತದೆ. ನಂತರ ಮಾದೇಶ್ವರ ಹೊರಗೆ ಬರುತ್ತಾನೆ. ಈರೇಗೌಡ ಮಾದೇಶ್ವರನ ಒಕ್ಕಲಾಗುತ್ತಾನೆ. ಆವನಿಗೆ ದೇವಾಲಯವನ್ನು ಕಟ್ಟಿಸುತ್ತಾನೆ.

ಬದನಾಳು ಮಠಸೇರಿದ ಮಾದೇಶ್ವರ ಅಲ್ಲಿಯೂ ಪವಾಡ ಮಾಡುತ್ತಾನೆ. ಗುರುಗಳು ಶಿಷ್ಯರ ಜೊತೆ ಮಾದೇಶ್ವರನನ್ನು ಬದನೆ ಸಸಿ ನೆಡಲು ಕಳುಹಿಸುತ್ತಾರೆ. ಆಗ ಮಾದೇಶ್ವರ ಸಸಿಗಳನ್ನು ಬೇರು ಮೇಲಾಗಿ ಚಿಗುರು ಕೆಳಗಾಗಿ ನಾಟಿ ಮಾಡುತ್ತಾನೆ. ಇದನ್ನು ಪ್ರಶ್ನಿಸದ ಶಿಷ್ಯರನ್ನು ಮಾದೇಶ್ವರ ಗದರಿಸುತ್ತಾನೆ. ಶಿಷ್ಯರು ಗುರುಗಳಿಗೆ ಬಂದು ಹೇಳುತ್ತಾರೆ. ಆಗ ಮಾದೇಶ್ವರ ಗುರುಗಳನ್ನು ಕರೆದುಕೊಂಡು ಹೋಗಿ ತೋರಿಸುತ್ತಾನೆ. ಅಲ್ಲಿ ಶಿಷ್ಯರು ಹಾಕಿದ ಸಸಿಗಳೆಲ್ಲ ಬತ್ತಿ ಬಾಡಿ ಹೋಗಿರುತ್ತವೆ. ಆದರೆ ಮಾದೇಶ್ವರ ಹಾಕಿದ ಸಸಿಗಳು ಚಿಗುರಿ ಹೂಬಿಟ್ಟು ಹೀಚಾಗಿ ಕಾಯಿ ಗಿಡದ ತುಂಬ ತುಳುಕಾಡುತ್ತಿರುತ್ತವೆ.

ಸುತ್ತೂರು ಮಠಕ್ಕೆ ಮಾದೇಶ್ವರ ಬರುತ್ತಾನೆ. ಅಲ್ಲಿ ಮಾದೇಶ್ವರನಿಗೆ ರಾಗಿ ಬೀಸುವ ಕೆಲಸ ಕೊಡುತ್ತಾರೆ. ಆಗ ಅವನು ಮೂಕಳ್ಳಿ ಮಾರಮ್ಮನನ್ನು ಕರೆದು ಅವಳಿಂದ ರಾಗಿಯನ್ನು ಬೀಸಿಸುತ್ತಾನೆ. ನಂತರ ಕುಂತೂರು ಮಠಕ್ಕೆ ಮಾದೇಶ್ವರ ಬರುತ್ತಾನೆ. ಆಗ ಗುರುಗಳ ಕಾಲಿಗೆ ಬಿದ್ದು ತನಗೆ ವಿದ್ಯೆಯನ್ನು ಬುದ್ಧಿಯನ್ನು ಕಲಿಸಬೇಕೆಂದು ಕೇಳಿಕೊಳ್ಳುತ್ತಾರೆ.

"ಇದ್ಯಾ ಎಂದಾರೆ ಅಂತಿಂತೆದಲ್ಲ
ಬುದ್ಧಿಯಾ ಕಲಿಸಿ ಗುರುಗಳೆ
ಹಿರಿಸೊಸೆಗೆ ಹಿಂಡುಗಾಳಿಯ
ಹಿಡಿಸುವ ವಿದ್ಯೆ ಕಲಿಸಯ್ಯ
ಹಿರೀ ಮಗನಿಗೆ ಹುಚ್ಚುಬರಿಸುವ
ಇದ್ಯೆವ ನನಗೆ ಕಲಿಸಯ್ಯ
ಮದ್ದಿಕ್ಕಿದೋರನ್ನೆಯ ಮದ್ದಾನ್ನೆ ಮುರಿವ
ಇದ್ಯೆವ ನನಗೆ ಕಲಿಸಯ್ಯ
ಹಿಂಡುಗಾಳಿಗೆ ಗಂಡ ನಾನಾಗೊ
ಇದ್ಯವ ನೆನಗೆ ಕಲಿಸಯ್ಯ
ಹುಲಿಯೇ ಕಲ್ಲಾದೋ ಕಲ್ಲೆ ಹುಲಿಯಾಗೋ
ಇದ್ಯವ ನನಗೆ ಕಲಿಸಯ್ಯ"[1]

ಈ ವಿದ್ಯೆಯನ್ನು ಕಲಿಯುವುದರ ಮೂಲಕ ತಾನು ಕಾರಣಿಕ ಪುರುಷನಾಗಬೇಕೆಂಬುದು ಮಾದೇಶ್ವರನ ಬಯಕೆ. ಆ ಸಾಮರ್ಥ್ಯ ತನ್ನಲಿದೆ ಎಂದೂ ಹೇಳುತ್ತಾನೆ. ಈ ವಿದ್ಯೆಯ ಮೂಲಕವೇ ತನ್ನ ಜೀವನದ ಧೋರಣೆಗಳನ್ನೂ ರೂಪಿಸಿಕೊಳ್ಳುತ್ತಾನೆ. ಗುರುಗಳು ಮಾದೇಶ್ವರನನ್ನು ಕೂಡ ಪೂಜೆಗೆ ಹೂವು ತರುವುದಕ್ಕೆ ಕಳುಹಿಸುತ್ತಾರೆ. ಮಾದೇಶ್ವರ ಒಂದು ಮುಳ್ಳು ಚುಚ್ಚಿ ಬೀಳುತ್ತಾನೆ. ತೆಗೆಯಲು ಬಂದ ಶಿಷ್ಯರು ಮುಳ್ಳನ್ನು

ತೆಗೆದು, ಅವರು ಹೂವು ಕೀಳಲು ಹೋಗುತ್ತಾರೆ. ಆ ನಂತರ ಅವರು ಹಿಂದಿರುಗುವ ವೇಳೆಗೆ ಮಾದೇಶ್ವರ ಹುಲಿಯ ಮೇಲೆ ಕುಳಿತು ಆಟವಾಡುತ್ತಿರುತ್ತಾನೆ. ಇದು ಪ್ರತಿದಿನವು ಮುಂದುವರೆಯುತ್ತದೆ. ಕುಂತೂರು ಮಠದ ಪ್ರಭುಸ್ವಾಮಿಗಳು ಸ್ನಾನ ಮಾಡಿದ ನೀರು ಹರಿದು ಬಂದು ಹಳ್ಳದಲ್ಲಿ ನಿಲ್ಲುತ್ತಿತ್ತು. ಮಾದೇಶ್ವರ ಗೊದ್ದ ಗೋಸಂಬಿಯನ್ನು ಹಿಡಿದು ಆ ನೀರಲ್ಲಿ ಮುಳುಗಿಸಿ ಹೂವುಗಳನ್ನಾಗಿ ಪರಿವರ್ತಿಸುತ್ತಿದ್ದ.

ಮಾದೇಶ್ವರನನ್ನು ಉಕ್ಕನಹಳ್ಳಿ ಬಸವನಿಗೆ ಪೂಜೆ ಮಾಡಲು ಆಹಾರ ತೆಗೆದುಕೊಂಡು ಹೋಗಲು ನೇಮಕಗೊಳ್ಳುತ್ತಾನೆ. ಉಕ್ಕನಹಳ್ಳಿ ಬಸವ ಅವನಿಗೆ ಆಹಾರ ತರುತ್ತಿದ್ದ ತಮ್ಮಡಿಗಳನ್ನು ಗುದ್ದಿ ಗುದ್ದಿ ಸಾಯಿಸುತ್ತಿದ್ದ. ಆ ಸಂದರ್ಭದಲ್ಲಿ ಮಾದೇಶ್ವರ ಅವರನ ಸೊಕ್ಕು ಮುರಿಯಲು ನಿರ್ಧರಿಸಿ ಆಹಾರ ತೆಗೆದುಕೊಂಡು ಹೋಗುತ್ತಾನೆ. ಬಸವನಿಗೆ ಮಾದೇಶ್ವರ ಪೂಜೆಯನ್ನು ಮಾಡುತ್ತಾನೆ. ಆಗ ಬಸವ ಮಾದೇಶ್ವರನನ್ನು ತಿನ್ನಲು ಬರುತ್ತಾನೆ. ಆಗ ಮಾದೇಶ್ವರ ಬಸವನಿಗೆ ಉರುಸಿಂಗಿ ಕೊರೆದೆನಿಂದ ಹೊಡೆಯುತ್ತಾನೆ. ಆಗ ಬಸವ ಜೀವಂತವಾಗಿದ್ದೋನು ಕಲ್ಲಾಗಿ ಕಣ್ಣಲ್ಲಿ ನೀರು ಸುರಿಸುತ್ತಾನೆ.

ಇಕ್ಕೇರಿ ದೇವಮ್ಮನ ಅಹಂಕಾರವನ್ನು ಅಡಗಿಸುವ ಸಂದರ್ಭದಲ್ಲಿ ಅವಳು ಸಾಲು ಸಮಾಧಿ ಮಾಡಿರುವ ಮಕ್ಕಳನ್ನು ಹುಲಿಗಳ ಸಮಾಧಿಯಿಂದ ಹೊರತಂದು ಮನೆ ಬಾಗಿಲಿಗೆ ಹಾಕುವುದು. ಅವಳು ಮಾಡಿದ ವಿಷದ ಕಜ್ಜಾಯವನ್ನು ಅವಳ ಮಕ್ಕಳಿಗೆ ತಿನ್ನಿಸುವುದು, ನಂತರ ತಾನೇ ಊರಿನ ಮುಖಂಡರಂತೆ ವೇಷ ಬದಲಾಯಿಸುವುದು, ಅವನ ಪವಾಡಗಳೇ ಆಗಿವೆ. ಬೇವಿನಟ್ಟಿ ಕಾಳಮ್ಮನ ಸಂದರ್ಭದಲ್ಲಂತು ಅನೇಕ ಪವಾಡಗಳನ್ನು ಮಾಡುತ್ತಾನೆ. ಅವಳ ಮನೆ ಮುಂದೆ ಕಾವಲಿರುವ ನಾಯಿ, ಆಳುಗಳನನು ನಾಶಮಾಡುವುದು. ಎಳ್ಳುರಾಶಿ ಇರುವ ಕಣಕ್ಕೆ ಹೋದಾಗ ವಾಯುದೇವನಿಗೆ ತಾನು ಹೇಳಿದಾಗ ಗಾಳಿ ಬೀಸಬೇಕು ಎನ್ನುವುದು. ನೊಣಗಳನ್ನು ಕರೆವುದು. ಅತ್ಯಂತ ಅಸಹ್ಯಕರವಾಗಿ ಕೀವು ರಕ್ತ ಸೋರುವ ಮುದುಕನಾಗಿ ಭಿಕ್ಷೆ ಬೇಡುವುದು. ಕಾಳಮ್ಮ ಹೊಡೆಯಲು ಬಂದಾಗ ಸತ್ತಂತೆ ಮಲಗುವುದು. ಭಿಕ್ಷೆ ನೀಡಲಾರದೆ ಕಾಳಮ್ಮ ಏನೇನು ಕೇಡನ್ನು ಬಯಸುತ್ತಾಳೋ ಅದೆಲ್ಲವನ್ನು ಈಡೇರಿಸಿ ಅವಳಿಗೆ ಕಷ್ಟ ಕೊಡುವುದು. ಜೀತಗಾರರು ನಾಶವಾಗುವುದು, ಕುರಿ ಎಮ್ಮೆ ದನ ನಾಶವಾಗುವುದು. ಗಂಡ ಹುಲಿಬಾಯಿಗೆ ಸಿಕ್ಕುವುದು. ಸೊಸೆಯಂದಿರು ವಿಧವೆಯಾಗುವುದು.  ಮೊಮ್ಮಕ್ಕಳು ಸಾಯುವುದು, ಅವಳ ಹಟ್ಟಿ ನಾಶವಾಗುವುದು. ಕಾಳಮ್ಮ ಕಲ್ಲಾಗುವುದು ಈ ಎಲ್ಲವೂ ಮಾದೇಶ್ವರನ ಪವಾಡಗಳೇ ಆಗಿವೆ. ದುರ್ಗದ ಮಲ್ಲಮ್ಮನಿಗೆ ಅವರ ಅತ್ತೆ ಮಾವ ಮಾದೇಶ್ವರನ ಬೆಟ್ಟಕ್ಕೆ ಹೋಗಲು ಅಪ್ಪಣೆ ಕೊಡುವುದಿಲ್ಲ. ಆಗ ಮಾದೇಶ್ವರ ಮಾರಮ್ಮನನ್ನು ದುರ್ಗದ ಮಲ್ಲಮ್ಮನಂತೆ ಅವಳ ಮನೆಯಲ್ಲಿರಿಸಿ ಅವಳನ್ನು ತನ್ನ ಜಾತ್ರೆಗೆ ಕರೆಸಿಕೊಳ್ಳುತ್ತಾನೆ. ಸಂಕಮ್ಮನ ಸನ್ನಿವೇಶದಲ್ಲಿ ಮಾದೇಶ್ವರ ಅನೇಕ ಪವಾಡಗಳನ್ನು ಮಾಡುತ್ತಾನೆ. ನೀಲಯ್ಯ ಸಂಕಮ್ಮನನ್ನು ಕತ್ತಿಯಿಂದ ಹೊಡೆಯಲು ಬಂದಾಗ ಅದು ಬಾಳೆಯ ಸುಳಿಯಾಗುವುದು. ಸಂಕಮ್ಮನು ಒನಕೆಯಿಂದ ನಾರು ತೆಗೆಯುವುದು. ಕುದಿಯುತ್ತಿರುವ ಎಣ್ಣೆ ಕೊಪ್ಪರಿಗೆಯಿಂದ ಎದ್ದು ಬರುವುದು. ಅವಳನ್ನು ಗುಂಡಿ ಒಳಗೆ ಕೂರಿಸಿ ಸುಣ್ಣವನ್ನು ನೀರನ್ನು ಸುರಿಯುವುದು ನಂತರ ಅವಳು ಜೀವಂತವಾಗಿ ಬರುವುದು. ರಾಗಿ, ಸಾಸಿವೆ, ಜೀರಿಗೆ, ಎಳ್ಳು ಮರಳು, ಇವುಗಳ ಮಿಶ್ರಣವನ್ನು

ಬೇರ್ಪಡಿಸುವುದು, ಒಮ್ಮೆ ಅವಳನ್ನು ಗುಂಡಿಗೆ ಕಟ್ಟಿ ಒಯದ ಕಮರಿಗೆ ತಳ್ಳುವುದು ಈ ಎಲ್ಲ ಪರೀಕ್ಷೆಗಳಲ್ಲಿ ಮಾದೇಶ್ವರನ ನಿಚ್ಚಳವಾದ ಪವಾಡ ಶಕ್ತಿ ಕೆಲಸ ಮಾಡಿದೆ. ನೀಲಯ್ಯನು ಮಕ್ಕಳನ್ನು ದಾನ ನೀಡದ ಗವಿಯಲ್ಲಿ ಅವಿತುಕೊಂಡಾಗ ಹುಲಿಗಳು ಬಂದು ಎದುರಿಸುವುದು ಇವುಗಳು ಮಾದೇಶ್ವರನ ಪವಾಡಗಳು.

ಜುಂಜೇಗೌಡನು ಒಕ್ಕಲಾಗದಿರಲು ಅವನ ಹಸು ರಕ್ತ ಕರೆಯುವಂತೆ ಮಾಡುವುದು ನಂತರ ಕಣಿ ಹೇಳುವ ವೇಷದಲ್ಲಿ ಕಾಣಿಸಿಕೊಂಡು ಏಕೆ ಹೀಗಾಯಿತು ಎಂದು ಹೇಳುವುದು. ಹಣವನ್ನು ಕಲ್ಲು ಮಾಡುವುದು, ಕಣಜದಲ್ಲಿರುವ ಧಾನ್ಯವನ್ನು ಮರಳು ಮಾಡುವುದು, ಮಕ್ಕಳು ಸಾಯುವುದು, ಅವನ ದನ ಕರುಗಳು ಮಾಯವಾಗುವಂತೆ ಮಾಡುವುದು.

ಮುಡುಕುತೊರೆ ಮಲ್ಲಣ್ಣ, ಪಟ್ಟದ ರಂಗಸ್ವಾಮಿ ಹೀಗೆ ಬೇರೆ ದೇವರುಗಳೊಂದಿಗೆ ವ್ಯವಹರಿಸುವುದು. ಒಕ್ಕಲುಗಳನ್ನು ಪಡೆಯಲು ಅವರು ಹಠಮಾಡಿದರೆ ಅವರಿಗೆ ಆಹಾರ ಇಲ್ಲದಂತೆ ಮಾಡುವುದು, ಪ್ರತಿ ಸಲಕ್ಕೂ 'ನನಗೆ ಮಾದೇಶ್ವರ ಅನ್ನುವಂತ ಛಲ ಯಾಕೆ' ಎಂದು ಎಚ್ಚರಿಸಿಕೊಯಡ ಅವರನ್ನು ಗೋಳಾಡಿಸುವುದು, ಉಡಲು ಬಟ್ಟೆಯೂ ಇಲ್ಲದಂತೆ ಮಾಡುವುದು, ಮೂಕನಳ್ಳಿ ಮಾರಮ್ಮ ಇತ್ಯಾದಿ ಹೆಣ್ಣು ದೇವರನ್ನು ಶಿಕ್ಷಿಸಿ ತನ್ನ ಮಾತೆ ಕೇಳುವಂತೆ ಮಾಡುವುದು ಇತ್ಯಾದಿ.

ಈಗ ಮಾದೇಶ್ವರ ಸನ್ನಿಧಾನದಲ್ಲಿ ನಡೆಯುವ ಕೆಲವು ವಿಶೇಷ ಪವಾಡಗಳು ಮತ್ತು ಆಚರಣೆಗಳನ್ನು ಗುರ್ತಿಸಬಹುದು. "ತಮ್ಮಡಿಗಳಲ್ಲಿ ಹೂಜುಮಲೆ ಪಾಲಿನ ಮನೆತನ ಮತ್ತು ಮಣ್ಣೆಪಾಲಿನ ಮನೆತನದವರೆಂಬ ಪಂಗಡದವರಿದ್ದಾರೆ. ಮಾದೇಶ್ವರನ ವಿಶೇಷ ಪೂಜೆಗೆ ಹಾಲಳ್ಳದಿಂದ ತೀರ್ಥವನ್ನು ತರುವುದು ಹೂಜು ಮಲೆಪಾಲಿನವರು, ಪೂಜಾ ಸಮಯದಲ್ಲಿ ಜಾಗ್ಟೆ ನಗಾರಿ ನೌಪತ್ತುಗಳನ್ನು ಬಾರಿಸುವವರು ಮಣ್ಣೆ ಪಾಲಿನವರು."

ಹಾಲಳ್ಳದಿಂದ ತೀರ್ತ ತರುವ ಆಚರಣೆ ಹಿಂದಿನಿಂದ ನಡೆದು ಬಂದಿದೆ. ಹೂಜುಮಲೆ ಪಾಲಿನ ಹೆಣ್ಣು ಮಕ್ಕಳು ಬಹಳ ಕಟ್ಟುನಿಟ್ಟನಿಂದ ಹಾಲಳ್ಳಕ್ಕೆ ಹೋಗಿ ಪೂಜೆ ಮಾಡಿ ಅರಣೆಗಡಿಗೆಗಳಲ್ಲಿ ತೀರ್ಥವನ್ನು ತುಂಬಿಕೊಂಡು ಕತ್ತಿಪವಾಡದ ಹಳ್ಳದ ಬಳಿ ತಂದಿಟ್ಟುಕೊಂಡಿರುತ್ತಾರೆ. ಅಲ್ಲಿಗೆ ಸಾಲೂರು ಮಠದ ಸ್ವಾಮಿಗಳು ವೀರಗಾಸೆ ಕಟ್ಟಿಕೊಂಡು ಕುಣಿಯುವ ತಮ್ಮಡಿಗಳೊಡನೆ ಹೋಗಿ ತೀರ್ಥಹೊತ್ತವರನ್ನು ಎದುರುಗೊಂಡು ಪೂಜೆ ಮಾಡುತ್ತಾರೆ.

"ಈ ತಮ್ಮಡಿಗಳು ವೀರಾವೇಶದಿಂದ ಕುಣಿಯುತ್ತಿರುತ್ತಾರೆ. ಇಬ್ಬರು ಬಲವಾಗಿ ಹಿಡಿದುಕೊಂಡಿರುವ ಕತ್ತಿಯ ಮೇಲೆ ಈ ತಮ್ಮಡಿಗಳು ಬೀಳುತ್ತಾರೆ. ಈ ಪವಾಡದಲ್ಲಿ ಅವರಿಗೆ ಯಾವ ತೊಂದರೆಯೂ ಆಗುವುದಿಲ್ಲ. ಅಷ್ಟೇಕೆ ಹರಿತವಾದ ಕತ್ತಿಯ ಮೇಲೆ ಬಿದ್ದು ಒದ್ದಾಡಿದರೂ ಏನೂ ಆಗುವುದಿಲ್ಲ. ಅಲ್ಲಿಂದ ನಡೆಮುಡಿ ಹಾಸಿ ಕರೆದು ತಂದು ಅರಕೆಗಡಿಗೆಯಲ್ಲಿನ ತೀರ್ಥದಿಂದ ಮಾದೇವನಿಗೆ ಅಭಿಷೇಕ ಮಾಡುತ್ತಾರೆ"[2]

ಮಾದೇಶ್ವರನ ಬೆಟ್ಟದಲ್ಲಿ ಶಿವರಾತ್ರಿ, ಉಗಾದಿ, ದೀಪಾವಳಿ ಹಬ್ಬಗಳಲ್ಲಿ ವಿಶೇಷ ಪೂಜೆ, ಅಭಿಷೇಕ, ಉತ್ಸವಗಳು ನಡೆಯುತ್ತವೆ. ಮಾದೇಶ್ವರನಿಗೆ ಚಿನ್ನದ ಕೊಳಗ ಬೆಳ್ಳಿಯ ಕೊಳಗಗಳಲ್ಲಿ ವಿಶೇಷ ಅಲಂಕಾರ ಮಾಡುತ್ತಾರೆ.

ಈ ಉತ್ಸವಗಳಲ್ಲಿ ಅತ್ಯಂತ ವೈಶಿಷ್ಟ್ಯಪೂರ್ಣವಾದದ್ದು ಶೇಷಣ್ಣೊಡೆಯರ ಉತ್ಸವ, ಇದು 12 ವರ್ಷಕ್ಕೊಮ್ಮೆ ನಡೆಯುತ್ತದೆ. ಶೇಷಣ್ಣೊಡೆಯರ ಉತ್ಸವಕ್ಕೆ ಅನ್ನದ ಎಡೆ ಮಾಡುತ್ತಾರೆ. ಇದಕ್ಕೆ ಅಗರದ ಗಂಗಡಕಾರ ಒಕ್ಕಲಿಗರ ಗದ್ದೆಯ ಕೊನೇ ಮೇಗಳ ಬತ್ತ, ಆಲೆಮನೆ ಕೊಪ್ಪರಿಗೆಯಲ್ಲಿ ಆಗ ತಾನೇ ಅರಬೇಯಿಸಿ ಮಾಡಿದ ಹೊಸಬೆಲ್ಲ, ಎಳಂದೂರು ಕಾಯಿ ತಮಿಳುನಾಡಿನ ಮಲ್ಲಮ್ಮನ ದುರ್ಗದ ಬಾಳೆಹಣ್ಣು ಮೈಸೂರಿನ ನೂರೆಂಟುಮೊಳ ಚಂದ್ರಗಾವಿ ಇವೆಲ್ಲವನ್ನು ಅಣಿಮಾಡಿಕೊಳ್ಳುತ್ತಾರೆ. ದೇವಸ್ಥಾನದ ಸಮೀಪದಲ್ಲಿ ಹೊಸದಾಗಿ ಮರದ ಒರಳು, ಮರದ ಒನಕೆ ಮಾಡಿ ಅದರಲ್ಲಿ ಹಸಿ ಬತ್ತವನ್ನು ಹಾಕಿ ಕುಟ್ಟುತ್ತಾರೆ. ಉಪವಾಸವಿರುವ ಪೂಜಾರಿ ಮಾಡಿಕೊಟ್ಟ ಹಸಿಕರಗಕ್ಕೆ ಅಕ್ಕಿ ಹಾಕಿ ಅಂತರಗಂಗೆಯ ನೀರನ್ನು ಹಾಲನ್ನು ಬೆರೆಸುತ್ತಾರೆ. ಕಟ್ಟುನಿಟ್ಟಿನಿಂದಿದ್ದ ಪೂಜಾರಿಯು ಕುದಿಯುತ್ತಿರುವ ಮಡಕೆಗೆ ಕೈಹಾಕಿ ಅನ್ನವನ್ನು ತಿರುವುತ್ತಾನೆ. ಕೊತಕೊತನೆ ಕುದಿಯುತ್ತಿದ್ದ ಕರಗಕ್ಕೆ ಅವನು ಕೈಹಾಕಿದರೂ ಅವನಿಗೆ ಬೊಬ್ಬೆ ಬಂದಿರುವುದಿಲ್ಲ. ಈ ರೀತಿ ಮಾಡಿದ ಅನ್ನವನ್ನು ಶೇಷಣ್ಣನಿಗೆ ಎಡೆಮಾಡಿ ನೂರೆಂಟು ಸಲ ಪೂಜೆ ಮಾಡಿ ಕುಂಬಾಭಿಷೇಕ ಮಾಡುತ್ತಾರೆ. ಶೇಷಣ್ಣ ದನಕಾಯುತ್ತಿದ್ದನೆಂಬ ಪ್ರತೀತಿ ಇರುವುದರಿಂದ ಅವನ ಪೂಜೆಗೆ ಬೆಳ್ಳಿಯಲ್ಲಿ ಮಾಡಿದ ಒಂದು ಕೊಳಲು, ಒಂದು ಕತ್ತಿ, ಒಂದು ಕೊಡಲಿಯನ್ನೂ ಗದ್ದುಗೆ ಮೇಲಿಟ್ಟಿರುತ್ತಾರೆ.

ಮಾದೇಶ್ವರನಿಗೆ ಸರಗೂರಪ್ಪನ ಸೇವೆಯೂ ಹಿಂದಿನಿಂದ ನಡೆದು ಬಂದದ್ದು. ಸರಗೂರಪ್ಪನವರು ಪ್ರತಿ ತಿಂಗಳು ಬೆಟ್ಟಕ್ಕೆ ಬಂದು ಸ್ವಾಮಿಗೆ ಎಣ್ಣೆ ಮಜ್ಜಣ ಮಾಡಿ ಹೋಗುವ ರೂಢಿ ಇದೆ. ಒಂದು ಸೀರೆಳ್ಳು, ಒಂದು ಅಡಕೆ ಹೊಬಾಳೆ, ಒಂದೆಳನೀರು, ಒಂದು ಸೇರಕ್ಕಿ ಒಂದಚ್ಚು ಬೆಲ್ಲ, ಎಲೆಅಡಿಕೆ ಕಡ್ಡಿ ಕರ್ಪೂರ ನಾಲ್ಕಾಣೆ ದಕ್ಷಿಣೆ ಇವೆಲ್ಲವನ್ನೂ ದೇವಸ್ಥಾನಕ್ಕೆ ಕೊಡುತ್ತಾರೆ. ಎಳ್ಳನ್ನು ತಳಿಗೆ ಮನೆಯಲ್ಲಿ ಅರೆದು ಎಣ್ಣೆ ತೆಗೆದು ಮಾದೇಶ್ವರನ ಲಿಂಗಕ್ಕೆ ಮಜ್ಜಣ ಮಾಡಿಸುತ್ತಾರೆ. ದೇವಾಲಯದ ಬಲದ್ವಾರದ ಪೌಳಿ ಮೇಲೆ ಆಲಂಬಾಡಿ ಬಸವನ ವಿಗ್ರಹವಿದೆ. ಈ ಬಸವ ಆಲಂಬಾಡಿ ರಾಜ್ಯದ ಕಡೆಗೆ ದೃಷ್ಟಿಯನ್ನು ಮಾಡಿ ಕುಳಿತಿದೆ ಎಂದೂ ಅದ್ರಿಗೆ ಬಂದ ದನಗಳು ಈ ಬಸವನಿರುವ ಕಡೆ ದಿಕ್ಕನ್ನು ದಿಟ್ಟಿಸಿದರೆ ಗಬ್ಬವಾಗುತ್ತದೆಂಬ ನಂಬಿಕೆ ಇದೆ.

ಮಾದೇಶ್ವರನ ಉತ್ಸವ ನಡೆಯುತ್ತಿದ್ದರೆ ತಮಿಳರು ರಥದ ಮೇಲೆ ಬೊಗಸೆ ಬೊಗಸೆ ಹಣವನ್ನ ಕೆಲವರು ವೀಳೆಯದೆಲೆಯ ಕಟ್ಟುಗಳನ್ನು ಎರಚುತ್ತಾರೆ. ಕೆಲವರು ಹೊಗೆಸೊಪ್ಪನ್ನು ಬೆಳೆದ ದವಸ ಧಾನ್ಯವನ್ನು ಎರಚುತ್ತಾರೆ. ಗೋಲಿಗಾತ್ರದ ಹಿಟ್ಟಿನ ಮುದ್ದೆಗಳನ್ನು ತೇರಿಗೆರಚುತ್ತಾರೆ.

ಜನಗಳು ಮಾದೇಶ್ವರನಿಗೆ ಹರಕೆಯನ್ನೂ ಮಾಡಿಕೊಳ್ಳುತ್ತಾರೆ. ಧೂಪದ ಸೇವೆ, ಹೆಜ್ಜೆ ನಮಸ್ಕಾರ, ಕೊಳದಲ್ಲಿ ಮಿಂದು ಅಡ್ಡಬೀಳುವ ಹರಕೆ, ಪಂಜಿನ ಸೇವೆ, ಉರುಳುಸೇವೆ ಮತ್ತ ಕೆಲವರು ದಬ್ಬಳದ ಗಾತ್ರದ ಸರಳುಗಳನ್ನು ಗಂಟಲಿಗೆ, ಬಾಯಿಗೆ, ಎದೆಗೆ ತೋಳಿಗೆ ತೊಡೆಗಳಿಗೆ ಹೊಟ್ಟೆಗೆ ಚುಚ್ಚಿಕೊಂಡು ತಮ್ಮಟೆಯ ಹೊಡೆತಕ್ಕೆ ತಕ್ಕತೆ ಕುಣಿಯುತ್ತ ಹರಕೆ ಸಲ್ಲಿಸುತ್ತಾರೆ. ಹೀಗೆ ಅನೇಕ ಆಚರಣೆಗಳು ನಂಬಿಕೆಗಳು ಪವಾಡಗಳು ಇವೆ.

ಈ ಅಧ್ಯಾಯ ಮಾದೇಶ್ವರನ ಅತಿ ಮಾನುಷ ವ್ಯಕ್ತಿತ್ವ, ಪವಾಡ, ನಂಬಿಕೆಗಳನ್ನು ತಿಳಿಸುತ್ತದೆ.

## ಅಡಿಟಿಪ್ಪಣಿ

1. ರಾಜಶೇಖರ ಪಿ.ಕೆ. (ಸಂ) ಮಲೆಯ ಮಾದೇಶ್ವರ - 2006 ಪುಟ - 222
2. ಅದೇ ಪುಟ 19

# ಅಧ್ಯಾಯ - 8
# ಉಪಸಂಹಾರ

ಮಲೆಯ ಮಾದೇಶ್ವರ ಸಾಂಸ್ಕೃತಿಕವಾಗಿ ಬುಡಕಟ್ಟು ಜನಾಂಗವನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಸುಧಾರಿಸಿದ ರೀತಿಯನ್ನು ಈಗಾಗಲೇ ಬುಡಕಟ್ಟಿನಲ್ಲಿದ್ದ ಜೀವ ವಿರೋಧಿ ಗುಣಗಳನ್ನು ಅದನ್ನು ಮಾದೇಶ್ವರ ನಿವಾರಿಸಿದ ರೀತಿಯನ್ನು ಸಂಪ್ರಬಂಧದಲ್ಲಿ ಚರ್ಚಿಸಿದೆ. ಜೊತೆ ಜೊತೆಗೇ ಬುಡಕಟ್ಟು ಜನಾಂಗದ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಸಂಪ್ರಬಂಧದಲ್ಲಿ ಗುರ್ತಿಸಲಾಗಿದೆ.

ಬುಡಕಟ್ಟು ಸಮುದಾಯಗಳು ಅರಣ್ಯದಲ್ಲಿಯೇ ತಮ್ಮ ನಿತ್ಯ ಕಸುಬುಗಳಾದ ಬೇಟೆ, ಜೇನು ಸಂಗ್ರಹಣೆ, ನಂತರ ಕೃಷಿ, ಪಶುಪಾಲನೆ ಇವುಗಳಲ್ಲಿಯೇ ಅತ್ಯಂತ ತಲ್ಲೀನತೆಯಿಂದ ಇದ್ದವು. ಆಗ ಅವರಿಗೆ ಬದುಕು ಪರಸ್ಪರ ಹೋರಾಟದಿಂದ ಮಾತ್ರ ಸಾಗುತ್ತಿತ್ತು. ಅವರು ಈ ಹೋರಾಟವನ್ನು ಹಿಂಸೆಯನ್ನು ತಮ್ಮ ಬದುಕಿನ ಅವಿಭಾಜ್ಯ ಅಂಗ ಎಂದು ಸಹಜತೆ ಎಂದು ತಿಳಿದಿದ್ದರು. ಆಗ ಮಾದೇಶ್ವರನ ಹೋರಾಟ ಮತ್ತು ಹಿಂಸೆಯನ್ನು ನಿಲ್ಲಿಸುತ್ತಾನೆ. ಅವರ ಬದುಕು ಸಹಬಾಳ್ವೆ, ಜೀವಪರವಾಗುವಂತೆ ಮಾಡುತ್ತಾನೆ. ಅವನು ಸಮಾಜ ಸುಧಾರಕನಾಗಿ ಕಂಡುಬರುತ್ತಾನೆ. ತಾನು ಅವಿವಾಹಿತನಾದರೂ ವಿರಾಗಿಯಾದರೂ ಸನ್ಯಾಸಿಯಾದರೂ ಕೂಡ ತನ್ನ ಇಡೀ ಜೀವನವನ್ನು ಬುಡಕ್ಟಟು ಜನಾಂಗದ ಸುಧಾರಣೆಗಾಗಿ ಮೀಸಲಿಡುತ್ತಾನೆ. ಸಮೂಹ ಮಂದಿಯನ್ನು ಒಕ್ಕಲುಗಳಾಗಿ ಪಡೆಯುವ ಮೂಲಕ ಸುಧಾರಣೆ ತರುತ್ತಾನೆ. ಕೆಲವು ಸಾರಿ ಒಕ್ಕಲುಗಳನ್ನು ಪಡೆಯುವ ವಿಧಾನ ಒರಟಾಗಿ ಕಂಡರೂ ಅದು ಅನಿವಾರ್ಯವಾಗಿತ್ತು. ಸಾಂಸ್ಕೃತಿಕ ಸುಧಾರಣೆಗೆ ಪೂರಕವಾಗಿತ್ತು. ಆ ಕಾಲಕ್ಕೆ ಧೈರ್ಯದಿಂದ ಧರ್ಮದ ಹಿನ್ನೆಲೆಲ್ಲಿ ಕೆಲಸ ಮಾಡಿರುವುದು ಕಂಡುಬರುತ್ತದೆ. ಇವನ ಜೀವನವನ್ನು ಚಿಂತನೆಯನ್ನು ಬೇರೆ ಬೇರೆ ರೀತಿಯ ಅಧ್ಯಯನಕ್ಕೆ ಒಳಪಡಿಸಲು ಅವಕಾಶಗಳಿವೆ. ಈ ಸಂಪ್ರಬಂಧ ಸಂಸ್ಕೃತಿ ಮತ್ತು ಅದರ ಸುಧಾರಿತ ನಿಲುವುಗಳ ಬಗೆಗಿನ ದೃಷ್ಟಿಕೋನವನ್ನು ಮಾತ್ರ ಹೊಂದಿದೆ.

ಕರ್ನಾಟಕದ ಮೂಲನಿವಾಸಿಗಳು ತಮ್ಮ ಬುಡಕಟ್ಟು ರಕ್ಷಣೆಗೆ ಧಾರ್ಮಿಕ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ವೀರರನ್ನು ಸೃಷ್ಟಿಸಿಕೊಂಡಿದ್ದಾರೆ. ಕಾಲಕಳೆದಂತೆ ಅಂತಹ ಸಾಂಸ್ಕೃತಿಕ ವೀರರಿಗೆ ದೈವತ್ವ ಪ್ರಾರಂಭವಾಗಿದೆ. ಪವಾಡ, ಅತಿಮಾನುಷತ್ವ ಮಾಟಗಾರಿಕೆ ಐತಿಹ್ಯ, ಚಮತ್ಕಾರ, ಉತ್ಪ್ರೇಕ್ಷೆ ಮೊದಲಾದವು ಆರೋಪಿತವಾಗಿವೆ. ಚಾರಿತ್ರಿಕ ವ್ಯಕ್ತಿಗಳಾಗಿದ್ದ ಸಾಂಸ್ಕೃತಿಕ ವೀರರು ಧಾರ್ಮಿಕ ಮಹಾಪುರುಷರಾಗಿ ಪೂಜಾರ್ಹರಾಗಿದದಾರೆ.

ಮಾದೇಶ್ವರ ತನ್ನ ಕಾಲದ ಮೂಲ ನಿವಾಸಿಗಳ ಸಾಮಾಜಿಕ ಸುಧಾರಣೆಗೆ, ಧಾರ್ಮಿಕ ಪ್ರೇರಮೆಗೆ ನೀಡಿರುವ ಕೊಡುಗೆ ಅಪಾರ, ಮಹಾತ್ಮ ಮಾದೇಶ್ವರ ಶೈವಾರಾಧಕರಿಗೆ ದೈವಾಂಶ ಸಂಭೂತ ಮಾತ್ರವಲ್ಲ ಸಾಕಾತ್ ದೈವವೇ ಆಗಿದ್ದಾನೆ. ಜನಹಿತ ಕಾರ್ಯಗಳಿಂದ ಮಾನವ ಮಾದೇವನಾಗುವ ಉದಾಹರಣೆಗೆ ಮಾದೇಶ್ವರ ಸಾಕ್ಷಿಯಾಗಿದ್ದಾನೆ. ಜೀವನ ಪರ್ಯಂತ ಏಕಾಂಗಿಯಾಗಿ ಜನಹಿತಬಯಸುವವನು ಮಾದೇಶ್ವರ. ಮಹಾಕಾವ್ಯದಲ್ಲಿ ಅವನ ಜೀವನ ಸಾಧನೆ ದೊರೆಯುತ್ತದೆ. ಮಹಾಕಾವ್ಯದಲ್ಲಿ ಪುರುಷ ಪ್ರಧಾನ

ಪ್ರಸಂಗಗಳಿರುವಂತೆ ಸ್ತ್ರೀ ಪ್ರಧಾನ ಪ್ರಸಂಗಗಳಿವೆ. ಲೌಕಿಕ ಪ್ರೀತಿಯ ಜೊತೆಗೆ ಅಲೌಕಿಕ ಪೋಷಣೆ ಮುಂತಾದ ಜೀವಪರ ಧೋರಣೆಗಳು ಎದ್ದುಕಾಣುತ್ತವೆ. ಯುದ್ಧಾಪೇಕ್ಷೆ ಸಾಮೂಹಿಕ ನಾಶ, ಪ್ರಕೃತಿ ವಿರೋಧ ಮೊದಲಾದ ಜೀವವಿರೋಧಿ ಗುಣಗಳು ಕಂಡುಬರುವುದಿಲ್ಲ. ಆಕಸ್ಮಿಕ ಘರ್ಷಣೆ ಉಂಟಾದರೆ ಅದು ವ್ಯಕ್ತಿನಿಷ್ಠವಾದದ್ದೇ ಹೊರತು, ಸಮಷ್ಟಿ ನಿಷ್ಠವಾದದ್ದಲ್ಲ. ಇಲ್ಲಿ ಕಂಡುಬರುವ ಪ್ರಕೃತಿ, ಪ್ರಾಣಿ, ಪಕ್ಷಿ, ಪ್ರೇಮ ವಿನೂತನವಾಗಿದೆ.

ಜಾನಪದ ವಿದ್ವಾಂಸರಾದ ಪ್ರೊ. ಡಿ. ಲಿಂಗಯ್ಯರವರ ಅಭಿಪ್ರಾಯದೊಂದಿಗೆ ಈ ಸಂಪ್ರಬಂಧವನ್ನು ಮುಗಿಸಬಹುದು. "ಮಲೆಮಾದೇಶ್ವರ ಮುಖ್ಯವಾಗಿ ಕೃಷಿಕರ ವಿದ್ಯಮಾನಗಳನ್ನು ಒಳಗೊಂಡ ಕಾವ್ಯ. ಕೃಷಿಕ ಸಮುದಾಯದಲ್ಲಿ ಧಾರ್ಮಿಕ ಜಾಗೃತಿಯನ್ನು ಜೀವನೋತ್ಸಾಹವನ್ನು ಮೂಡಿಸುವಲ್ಲಿ ಈ ಕಾವ್ಯ ಯಶಸ್ವಿಯಾಗಿದೆ. ಮಾದೇಶ್ವರ ಅಲೆದಾಡಿದ ಸ್ಥಳಗಳು. ಮಾಡಿದ ಪವಾಡಗಳು ಇಂದಿಗೂ ಜನಸಾಮಾನ್ಯರಲ್ಲಿ ಸ್ಫೂರ್ತಿ ದಾಯವಾಗಿರುವುದು ಈ ಕಾರಣದಿಂದಲೇ. ಮಾದೇಶ್ವರ ಜನಸಾಮಾನ್ಯರ ಕಷ್ಟ ನಿವಾರಿಸಿ, ಸುಖ ಸಂತೋಷ, ಸಂತಾನ ನೀಡಿ, ತನ್ನ ಒಕ್ಕಲು ವೃದ್ಧಿಸುವ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವುದು, ದೈವವಿರೋಧಿಗಳನ್ನು ಬಗ್ಗುಬಡಿದು ದೈವಭಕ್ತರನ್ನಾಗಿ ಮಾಡುವುದು, ಪ್ರಕೃತಿಯ ಪ್ರಾಣಿ ಸಮುದಾಯದಲ್ಲಿ ಆತ್ಮೀಯವಾಗಿ ಒಡನಾಡಿಯಾಗುವುದು ಮೂಲ ನಿವಾಸಿಗಳ ಸಾಂಸ್ಕೃತಿಕ ವಿಕಾಸಕ್ಕೆ ದಾರಿಮಾಡಿಕೊಟ್ಟಿದೆ." *

* ಲಿಂಗಯ್ಯ ಡಿ. ಜಾನಪದ ನೋಟಗಳು ಸಿ.ವಿ.ಜಿ ಪಬ್ಲಿಕೇಷನ್ ಪುಟ 55

# ಪರಾಮರ್ಶನ ಗ್ರಂಥಗಳು


1. ಅರವಿಂದ ಮಾಲಗತ್ತಿ (ಸಂ) ಮಲೆಯ ಮಾದೇಶ್ವರ ಪ್ರ : ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು 2002
2. ಕೇಶವನ್ ಪ್ರಸಾದ್ .ಕೆ. (ಸಂ) ಮಲೆ ಮಾದೇಶ್ವರ ; ಪ್ರ : ಕನ್ನಡ ವಿ.ವಿ. ಹಂಪಿ 1997
3. ರಾಜಶೇಖರ ಪಿ.ಕೆ. (ಸಂ) ಮಲೆಯ ಮಾದೇಶ್ವರ (2 ಸಂಪುಟಗಳು) ಪ್ರ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು 2006
4. ರಾಮಚಂದ್ರನ್ ಸಿ.ಎನ್. ಹೊಸ ಮಡಿಯ ಮೇಲೆ ಚದುರಂಗ ಪ್ರ : ಸ್ವಪ್ನ ಬುಕ್ ಹೌಸ್, ಬೆಂಗಳೂರು 2007
5. ಲಿಂಗಯ್ಯ .ಡಿ : ಜಾನಪದ ನೋಟಗಳು : ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು 2006
6. ಲಿಂಗಯ್ಯ ಡಿ : ಸಂಧ್ಯಾರೆಡ್ಡಿ ಕೆ.ಆರ್. (ಸಂ) ಜಾನಪದ ಸ್ವರೂಪ ಮತ್ತು ಸಾಹಿತ್ಯ : ಪ್ರ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 2006
7. ಶಂಕರನಾರಾಯಣ, ತೀ.ನಂ. (ಸಂ) ಕರ್ನಾಟಕ ಜನಪದ ಮಹಾಕಾವ್ಯಗಳು. ಪ್ರ : ಜಾನಪದ ಮತ್ತು ಯಕ್ಷಗಾನ ಇಲಾಖೆ, ಬೆಂ. 1998
8. ಸ್ವಾಮಿ ಬಿ.ಎಸ್ : ಮಲೆಯ ಮಾದೇಶ್ವರ ಒಂದು ಅಧ್ಯಯನ (ಸಂಶೋಧನ ಮಹಾಪ್ರಬಂಧ) ಪ್ರ. ನವೀನ ಪ್ರಕಾಶನ, ಬೆಂಗಳೂರು 1993.

